ಶಾರದಾ ಸಾಹಿತ್ಯಮಾಲೆಯ ೧೯ನೇ ಕಿರಣ

# ಹಾಳು-ಮೂಳು

[ನಗೆಬರಹಗಳು]

ಲೇಖಕರು :

ನಾಡಿಗೇರ್ ಕೃಷ್ಣರಾವ್

1951



ಶಾರದಾ ಪ್ರಕಟನಾಲಯ

ಅರಳೇಪೇಟೆ, ಬೆಂಗಳೂರು ೨.

ಮುದ್ರಣ :

೧ರಿಂದ ೬೪ ಪುಟಗಳವರೆಗೆ

**ಪ್ರಜಾಮತ ಪವರ್ ಪ್ರೆಸ್**

೬೫ರಿಂದ ಉಳಿದ ಪುಟಗಳು ಹಾಗೂ ರಕ್ಷಾಪತ್ರದ ಮುದ್ರಣ

**ಲಲಿತಾ ಪ್ರಿಂಟಿಂಗ್ ವರ್ಕ್ಸ್**

ಬೆಂಗಳೂರು ೨.

Checked 1969

**ಬೆಲೆ : ಒಂದು ರೂಪಾಯಿ**

(ಎಲ್ಲಾ ಹಕ್ಕುಗಳೂ ಲೇಖಕರಿಗೆ ಸೇರಿವೆ)

**ಮಾಲೆಯ ವಾರ್ಷಿಕ ಚಂದಾ :**

**೬ ರೂ. ೮ ಆ.**

(ಅಂಚೆ ವೆಚ್ಚ ಸೇರಿ)

# ಈ ಸಂಗ್ರಹದಲ್ಲಿ..........

- ★ ಕೆಲವು ಕಾಗದಗಳು
- ★ ಗಾದೆಗಳು
- ★ ಅಶ್ವಮೇಧ
- ★ ಪತ್ರಿಕೋದ್ಯಮ
- ★ ಯೋಜನೆಗಳು
- ★ ವಾಗ್ವೈಖರಿ
- ★ ದೇವರ ಸರ್ವಾಂತರ್ಯಾಮಿತ್ವ
- ★ ದಿನಪತ್ರಿಕೆ–ಕವಿತೆಯಲ್ಲಿ
- ★ ಬೇಸ್ತು
- ★ "ವಣ" ಮಹೋತ್ಸವ
- ★ ಬೋರ್ಡ್ ಬರಹ
- ★ ಕಮಲೂನ ರೇಡಿಯೋ ಪ್ರೋಗ್ರಾಂ
- ★ ಪತ್ರಿಕೆ ತಯಾರಿಕೆಯ ಸುಲಭ ಪಾಠಗಳು
- ★ ತಿದ್ದುಪಡಿ
- ★ ಅಶ್ವಸಾಹಿತ್ಯ
- ★ ಎಮ್ಮೆ ಕಟ್ಟಿದ್ದು
- ★ ಓ ಸಿ ಮಹಾತ್ಮೆ
- ★ ಸರ್ವಂ ಸೀಟಮಯಂ ಜಗತ್ ?

—ಎಂಬ ಹದಿನೆಂಟು ನಗೆಬರಹಗಳು.

# ಕೆಲವು ಕಾಗದಗಳು

ಈ ಕಾಗದಗಳನ್ನು ಬರೆದಿಟ್ಟು ಬಹಳ ದಿನಗಳಾದವು. ಕೆಲವನ್ನು ಹೆದರಿಕೆಯಿಂದಲೂ, ಕೆಲವಕ್ಕೆ ಅಂಚೆ ಚೀಟಿಗಳಿಲ್ಲದ್ದರಿಂದಲೂ ಅಂಚೆ ಡಬ್ಬಕ್ಕೆ ಹಾಕಲಿಲ್ಲ. ಸಾರ್ವಜನಿಕ ಹಿತದೃಷ್ಟಿಯಿಂದ ಇವನ್ನು ಪ್ರಕಟಿಸಲೇಬೇಕೆಂದು ಅನೇಕ ಜನರು ಒತ್ತಾಯ ಮಾಡಿದ್ದರಿಂದ ಪ್ರಕಟಿಸಿದ್ದೇನೆ.

## ದರ್ಜಿ ಮಹಾಶಯ

ಹಬ್ಬಕ್ಕೆ ಹೊಲಿದು ಕೊಡುತ್ತೇನೆಂದು ಬಟ್ಟೆ ತೆಗೆದುಕೊಂಡೆ, ಯಾವ ಹಬ್ಬ ಎಂತ ಖಚಿತವಾಗಿ ಹೇಳಲಿಲ್ಲ. ನಾನು ಎದುರಿಗಿದ್ದ ದೀಪಾವಳಿ ಅಂತ ತಿಳಿದುಕೊಂಡಿದ್ದೆ. ಹೋಳಿ ಹುಣ್ಣಿಮೆ ಆದರೂ ಬಟ್ಟೆ ತಯಾರಾಗಿಲ್ಲವಲ್ಲ!

ನಾನು ಯಾವಾಗ ಬಂದರೂ ನೀನಿರುವುದಿಲ್ಲ. ನಿನ್ನ ಶಿಷ್ಯರು ನನ್ನ ಮುಖ ಕಂಡಕೂಡಲೇ ತಾರಮ್ಮಯ್ಯ ಆಡುತ್ತಾರೆ. ಒಟ್ಟೆ ಎಲ್ಲಿದೆಯೋ, ಅದು ಯಾವ ಒಟ್ಟೆ, ನೀವು ಬಟ್ಟೆ ಹಾಕಿದ್ದುಂಟೆ ಎಂದು ಕೇಳುತ್ತಾರೆ.

ಯಾವಾಗ ಬಂದರೂ ಗುಂಡಿ ಹಚ್ಚಿಲ್ಲ, ಇಸ್ತ್ರಿ ಆಗಿಲ್ಲ ಎಂದು ಹೇಳುತ್ತೀಯ. ಆ ಹಾಳು ಕಬ್ಬಿಣದ ಪೆಟ್ಟಿಗೆಯನ್ನು ಒಂದಿಷ್ಟು ತಿಕ್ಕಲು ಎಷ್ಟು ತಿಂಗಳು ಬೇಕು?

ನೀನು ಹೇಳಿದ ಸಬೂಬುಗಳನ್ನೇ ನನ್ನ ಹೆಂಡತಿಗೆ ಹೇಳುತ್ತ ಬಂದಿದ್ದೇನೆ. ನನ್ನ ಹನ್ನೊಂದನೆಯ ಮಗನಿಗೆ ಹಾಕಿದ ಷರ್ಟು

ಹದಿಮೂರನೆಯವನಿಗೆ ಸಾಲುತ್ತೋ, ಏನೋ ? ನನ್ನ ಹೆಂಡತಿಗೆ ಹೊಲಿಹಾಕಿದ ಜಂಪರನ್ನು ನನ್ನ ಮಗಳು ತೊಡುತ್ತಿದ್ದಾಳೆ. ಮೊದಲೇ ಬೆಳೆಯುವ ಹುಡುಗರು, ನೀನು ವರ್ಷಗಟ್ಟಲೆ ಬಟ್ಟೆ ಇಟ್ಟುಕೊಂಡರೆ ಹೇಗೆ ?

ಈ ಭಾನುವಾರ ಹೇಗಾದರೂ ಮಾಡಿ ಕೊಟ್ಟುಬಿಡಪ್ಪ. ಮನೆಯಲ್ಲಿ ಬೈಸಿಕೊಂಡು ಸುಸ್ತಾಗಿದ್ದೇನೆ. ನಿನ್ನ ದಮ್ಮಯ್ಯ. ಕೊಟ್ಟುಬಿಡು.

ಇತಿ—

# ಅಗಸ ಮಹಾಶಯ

ಹೋದ ಶುಕ್ರವಾರ ಮಾರ್ಕೆಟ್ ಬಳಿ ನಿನ್ನನ್ನು ನೋಡಿದೆ ನನ್ನ ಕೋಟು ಅಳತೆ ಕೊಟ್ಟು ನಿನಗೆ ಹೊಲಿಸಿದ ಹಾಗಿದೆ. ನನ್ನ ಮದುವೆ ಪಂಚೇನೂ ನಿನಗೆ ಚೆನ್ನಾಗಿ ಒಪ್ಪುತ್ತೆ. ಆದ್ರೆ ಜೋಕೆ ಕಣಪ್ಪ ಎಲ್ಲಿಯಾದ್ರು ಮೊಳೆಗಿಳೆಗೆ ಸಿಕ್ಕಿಸಿ ಹರಿದುಹಾಕೀಯ !

ಏನು ಈ ಸಾರಿ ನೀನು ತಂದ ಒಗೆಯಲ್ಲಿ ಒಂದಕ್ಕೂ ಗುಂಡಿಯಿಲ್ಲವಲ್ಲಯ್ಯ. ಕೆಲವುದರಲ್ಲಿ ಮುಕ್ಕಾಲು, ಅರ್ಧ, ಎಂಟನೇ ಒಂದು ಭಾಗ ಹೀಗಿವೆ. ಓಹೋ ಇದೇನು ಕತ್ತಿನ ಪಟ್ಟಿಗಳೆಲ್ಲಾ ಚೂರಾಗಿವೆ. ಪಂಚೆ ಚೋಟಾ ಪಂಚೆಯಾಗಿದೆ. ನಾನು ಟರ್ಕಿ ಟವೆಲ್ ಹಾಕಿದ್ದೆ. ನೀನು ಇದು ಯಾವುದೋ ಸುಡುಗಾಡು ಅಂಗವಸ್ತ್ರ ತಂದಿದ್ದೀಯ.

ಸರಿಯಾಗಿ ಹುಡುಕಪ್ಪ ಮಹರಾಯಾ, ಇದ್ದ ಬಟ್ಟೇನೆಲ್ಲ ನಿನಗೆ ಹಾಕಿದ್ದೆ. ಅತ್ತೆ ಮನೆಗೆ ಹೋದಾಗ ಮಿರಿ ಮಿರಿ ಮಿಂಚೋಣ ಅಂತ ಎಲ್ಲಾ ನಿನಗೆ ಹಾಕಿದ್ದೆ. ಇನ್ನೊಂದು ಕತ್ತೇ ಮೇಲೆ ಬರುತ್ತೇ ಅಂತ ನೀನೇನೋ ಭರವಸೆ ಕೊಡ್ತೀಯ.

ಆ ಕತ್ತೇ ಮೇಲೆ ನನ್ನ ಬಟ್ಟೆ ಬರ್ಲಿಲ್ಲ ಅಂತೀಯ. ಹಾಗಾದರೆ ....ಇನ್ನಾರು ತಿಂಗಳಲ್ಲಿ ಅದರ ಅರ್ಧ ಹಣ ಕೊಡುತ್ತೀಯ, ಅಲ್ಲಿಯ ವರೆಗೆ ನಾನೇನು ಮಾಡಲಿ. ಬಟ್ಟೆ ಇಲ್ದೇ ಇರೋದಕ್ಕಿಂತ ಮಾಸಿದ

ಬಟ್ಟೆಯೇನೆ ಎಷ್ಟೋ ಮೇಲಾಗಿತ್ತು. ಇನ್ನು ನಿನ್ನಿಂದ ನಾಲ್ಕಾಣೆ, ಎಂಟಾಣೆ ವಸೂಲ್ಮಾಡಿಕೊಂಡು ನನ್ನ ಋಣ ಎಲ್ಲಾ ಭರ್ತಿ ಮಾಡಿಕೊಂಡ ಹಾಗೇ ಇದೆ. ಅಂತೂ ಬಡವ ಕೆಟ್ಟೆ. ಅತ್ತೆ ಮನೆಗೆ ಯಾವ ಬಟ್ಟೆ ಹಾಕಿಕೊಂಡು ಹೋಗಬೇಕೋ ಗೊತ್ತಿಲ್ಲ.

ಇತಿ—

## ಕವಾಡಿಗಿತ್ತಿಗೆ

ನಾನು ಹಂಸವಾಗಿದ್ದರೆ ಎಷ್ಟು ಚೆನ್ನಾಗಿರುತಿತ್ತು ಅಂತ ಅನ್ನಿಸುತ್ತದೆ. ಹಾಲನ್ನು ನೀರಿನಿಂದ ಬೇರ್ಪಡಿಸುವ ಶಕ್ತಿ ಹಂಸಕ್ಕೆ ಇರುತ್ತದಂತೆ. ನೀನು ಕೊಡುವ ನೀರು+ಹಾಲು ಬೇರ್ಪಡಿಸುವ ಶಕ್ತಿ ಖಂಡಿತವಾಗಿಯೂ ನನ್ನಲ್ಲಿಲ್ಲ. ಮನೆಯಲ್ಲಿ ಹಾಲು ಉಕ್ಕಿದ್ದನ್ನು ನಾವಾರೂ ನೋಡಿಲ್ಲ. ಹಾಲನ್ನು ಒಲೆಯ ಮೇಲಿಟ್ಟರೆ ಅದು ಬರೀ "ಸಳಮಳ" ಮರಳುತ್ತಿರುತ್ತದೆ. ನನ್ನ ದೇಹಪಂಜರದಲ್ಲಿ ಪ್ರಾಣವಾಯುವಿರುವಾಗ ಒಂದು ಬಾರಿ ಹಾಲು ಉಕ್ಕಿದ್ದನ್ನು ನೋಡಿ ಸಾಯಬೇಕೆಂದಿದ್ದೇನೆ.

ನೀನು ಕೊಡುವ ಹಾಲನ್ನು ಎಳೆಯ ಮಗುವಿಗೆ ಒಂದೆರಡು ದಿನ ಹಾಕಿದರು. ಅದಕ್ಕೆ ಒಂದೇ ಸಮನೆ ನೆಗಡಿ, ಶೀತ ಆಯಿತು. "ಮಗು ಇಷ್ಟೊಂದು ನೀರು ಕುಡಿದರೆ ಶೀತ ಆಗದೆ ಮತ್ತೇನು" ಅಂತ ನನ್ನ ಹೆಂಡತಿ ಹೇಳಿದಳು.

ಬೆಕ್ಕು ಹಾಲುಕುಡಿಯುತ್ತದೆ, ನೀರು ಕುಡಿಯುವುದಿಲ್ಲ ಎನ್ನುವ ವಿಷಯ ನಿನಗೆ ಗೊತ್ತಿರಬಹುದು. ನೀನು ತಂದು ಅಳೆಯುವ ಆ ಹಸರು ಬಣ್ಣದ ದ್ರಾವಕವನ್ನು ಯಾವ ಬೆಕ್ಕೂ ಮುಟ್ಟುವುದಿಲ್ಲ. ಇನ್ನು ಇಂಥ ಹಾಲನ್ನು ಹೆಪ್ಪುಹಾಕಿದರೆ ಅದು ಎಂಥ ಮೊಸರಾಗಿರುತ್ತದೆ, ನೀನೇ ಹೇಳು.

ರೂಪಾಯಿಗೆ ಒಂದು ಸೇರಾದರೆ ಕರೆದ ಹಾಲು ಕರೆದಂತೆ ತಂದು ಕೊಡುವುದಾಗಿ ಹೇಳಿದೆ. ಉತ್ತರದೇಶದಿಂದ ಎಮ್ಮೆ ತರಿಸುವುದಾಗಿ ಸಹ ಹೇಳಿದ್ದೆ. ನಿಜಕ್ಕೂ ನಿನ್ನ ಎಮ್ಮೆ ಹಿಮಾಲಯ

ಪರ್ವತ ತಪ್ಪಲಿನಿಂದ ಬಂದಿರಬೇಕು, ಹಾಲಿನ ಬದಲು ಅದು ಬರೀ ನೀರನ್ನು ಹಿಂಡುತ್ತಿರಬೇಕು. ನೀರಿನ ಮೇಲೆ ನಿನಗೆ ಅದೇಕೆ ಅಷ್ಟು ಅಭಿಮಾನವೋ ನನಗೆ ತಿಳಿಯದು. ಈ ಕಾಗದ ಓದಿದ ಮೇಲಾದರೂ ಕೊಂಚ ಗಟ್ಟಿ ಹಾಲು ತಂದುಕೊಡು.

ಇತಿ—

## ಸಂಪಾದಕ ಮಹಾಶಯ

ಕನ್ನಡಮ್ಮನ ಸೇವೆ ಮಾಡಲು "ಸುಂದರಿ" ಎಂಬ ನೀಳ್ಗತೆ ಮತ್ತು "ಕೋಗಿಲೆ" ಎಂಬ ಕವನವನ್ನು ನಿಮಗೆ ಕಳಿಸಿದ್ದೆ. "ಸುಂದರಿ" ಮಾಯವಾದಳು, "ಕೋಗಿಲೆ" ಹಾರಿಹೋಯಿತು. ಕಾದು ಕಾದು ಕಬ್ಬಿಣವಾದೆ. ನಿಮ್ಮ ಅಮೂಲ್ಯವಾದ ಪತ್ರಿಕೆಯಲ್ಲಿ ನನ್ನ ಬರಹಗಳು ಪ್ರಕಟವಾಗಲಿಲ್ಲ

ಅವೊತ್ತು ಅಜೀರ್ಣವಾದ ಹಿಂದಿನದಿನ ಸ್ಫೂರ್ತಿ ಬಂದು ಬರೆದಿದ್ದೆ. ನನ್ನಿಬ್ಬರು ಮಕ್ಕಳು, ನನ್ನ ಹೆಂಡತಿ ಚೆನ್ನಾಗಿವೆ ಅಂತ ಹೇಳಿದರು. ಹೇಗಿದ್ದರೂ ಅಚ್ಚಾಗುತ್ತದೆ ಎಂಬ ಭರವಸೆ ಮೇಲೆ ಬೇರೆ ಪ್ರತಿ ಮಾಡಿಕೊಂಡಿರಲಿಲ್ಲ.

ನೀವು ಹೇಳಿದಹಾಗೆ ಹಾಳೆಯ ಒಂದೇ ಕಡೆ, ಮಬ್ಬಾಗಿ, ಸ್ಫುಟವಾಗಿ ಬರೆದಿದ್ದೆ. ಅವು ಅಸ್ವೀಕೃತವಾದರೆ ನನಗೆ ವಾಪಸು ಬರಲೆಂದು ಸಾಕಷ್ಟು ಅಂಚೆ ಚೀಟಿಗಳನ್ನೂ ಹಚ್ಚಿದ್ದೆ.

ಮೊನ್ನೆ ನನ್ನ ಭಾವನನ್ನು ಹುಚ್ಚರಾಸ್ಪತ್ರೆಗೆ ಸೇರಿಸುವುದಕ್ಕೆ ಬೆಂಗಳೂರಿಗೆ ಬಂದಿದ್ದೆ. ಹಾಗೇ ನಮ್ಮಜ್ಜನ ಕಣ್ಣಿನ ಪರೆ ತೆಗಿಸಬೇಕಾಗಿತ್ತು. ನಿಮ್ಮ ಪತ್ರಿಕಾಲಯ ನೋಡಿ ಧನ್ಯನಾದೆ. ಆದರೆ ನನ್ನ ಕತೆ ಮತ್ತು ಕವಿತೆ ಎಲ್ಲಿಯೋ ಮಾಯವಾಗಿದೆಯೆಂದು ಉಪಸಂಪಾದಕರೊಬ್ಬರು ಕೆಟ್ಟಮುಖ ಹಾಕಿಕೊಂಡು ಹೇಳಿದರು.

ಈಚೆಗೆ ಆರು ತಿಂಗಳು ಕಳೆದ ಮೇಲೆ–ನಾನು ಊರಿಗೆ ಬಂದ ಮೇಲೆ—ನನ್ನ ಹೆಸರಿನಲ್ಲಿ ಬರೆದ ಒಂದು ಕತೆ ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದು ನನ್ನ ಕತೆ ಎಂದು ಹೇಳಲಾರೆ. ಮುದ್ರಾ

ರಾಕ್ಷಸನ ಹಾವಳಿ ಅದರಲ್ಲಿ ವಿಪರೀತವಾಗಿತ್ತು. ಅದು ಕನ್ನಡ ಭಾಷೆಯೇ ಎಂಬ ಅನುಮಾನ ಸಹ ನನಗೆ ಉಂಟಾಯಿತು

ಕತೆ, ಕವಿತೆ ಬರೆಯುವ ಹುಚ್ಚನ್ನು ನೀವು ಇಳಿಸಿದಿರಿ. ಇದರಿಂದ ನಿಮಗೆ ನಾನು ತುಂಬಾ ಉಪಕೃತನಾಗಿದ್ದೇನೆ

ಇತಿ—

## ಪುರಪಿತೃವೇ

ಮೊನ್ನೆ ನೀವು ನಮ್ಮ ಬೀದಿ ಕಡೆ ಬಂದಿದ್ದಿರಿ. ಈಗ್ಗೆ ಮೂರು ವರ್ಷಗಳ ಹಿಂದೊಮ್ಮೆ ಬಂದಿದ್ದಿರಿ. ಮತ್ತು ಚುನಾವಣೆ ಇರಬಹುದೂಂತ ಕಾಣುತ್ತೆ. ಇಲ್ಲದಿದ್ದರೆ ನೀವೆಲ್ಲ ಹಾಗೆ ಬರುವವರಲ್ಲ ಆಗ ಏನೇನೋ ಮಾಡಿಸ್ತೀನಿ ಅಂತ ಹೇಳಿದ್ದಿರಿ. ಅವೊಂದನ್ನೂ ನೀವು ಮಾಡಿಸಿಲ್ಲ. ನಮ್ಮ ಬೀದಿ ನಲ್ಲಿಯಲ್ಲಿ ಕಣ್ಣೀರಿನ ಹಾಗೆ ನೀರು ಬರುತ್ತದೆ. ದಪ್ಪ ಅಂದರೆ ಹಂಚಿಕಡ್ಡಿ ಗಾತ್ರ ನಾಲ್ಕು ಬಂಗಲೆಗಳನ್ನು ಕಟ್ಟಿಸಲು ಸಾಕಾಗುವಷ್ಟು ಕಲ್ಲುಗಳು ರಸ್ತೆಯ ಮೇಲಿವೆ. ನಮ್ಮ ಬೀದಿ ರಸ್ತೆ ರಿಪೇರಿಯಾದದ್ದು ನನಗಂತೂ ಜ್ಞಾಪಕವಿಲ್ಲ. ಯಾವಾಗಲೋ ಒಂದುಸಾರಿ ನಮ್ಮ ಬೀದೀಲಿ ಮಂತ್ರಿಗಳು ಬರುತ್ತಾರೆಂದಾಗ ಒಂದುಸಾರಿ ಚೊಕ್ಕಟ ಮಾಡಿಸಿದ್ದು ನೆನಪಿದೆ.

ಸರಿ, ಈ ಸಾರಿ ನಿಮಗೆ ಓಟುಕೊಟ್ಟರೆ ಎಲ್ಲಾ ಸರಿಮಾಡಿಸುವುದಾಗಿ ನೀವು ಹೇಳುತ್ತೀರೆಂದು ನನಗೆ ಗೊತ್ತು. ಹಾಳು ಆ ಕುರ್ಚಿಯ ಮೇಲೆ ಕೂತರೆ ನಿಮಗೆ ಎಲ್ಲಾ ಮರೆತುಹೋಗುತ್ತೆ. ಏನು ಇದೊಂದು ಸಾರಿ ಓಟುಕೊಟ್ಟು ನಿಮ್ಮನ್ನು ಪರೀಕ್ಷಿಸಬೇಕೆಂದು ಕೇಳುತ್ತೀರಾ ? ಖಂಡಿತ ಸಾಧ್ಯವಿಲ್ಲ. ನನ್ನ ಓಟು ಕಾಲಗೆಟ್ಟು ಹಾಳಾಗಿ ಹೋದರೂ ಚಿಂತೆಯಿಲ್ಲ. ನಾನು ಅದನ್ನು ಯಾರಿಗೂ ಕೊಡುವುದಿಲ್ಲ. ಅದು ಅಮೂಲ್ಯವಾದದ್ದು (ನೀವು ಹೇಳುವ ಹಾಗೆ) ಅದನ್ನು ನಾನು ಯಾರಿಗೂ ಕೊಡುವುದಿಲ್ಲ.

ಇತಿ—

# ಗಾದೆಗಳು

ಗಾದೆಗಳಿಗೆ ಹಳ್ಳಿಯೇ ಉಗಮ ಸ್ಥಾನ. ನಮ್ಮ ಸಾಹಿತ್ಯ ಬೆಳೆದಿರುವುದು ನಗರಗಳಲ್ಲಿಯಾದರೂ ಅದಕ್ಕೆ ಬುನಾದಿ ಹಳ್ಳಿಯೇ ಆಗಿದೆ. ಸಾಮಾನ್ಯವಾಗಿ ಹಳ್ಳಿಗರ ಮಾತಿನಲ್ಲಿ ಗಾದೆಗಳು ಹಾಸು ಹೊಕ್ಕಾಗಿ ಹೆಣೆದುಕೊಂಡಿರುತ್ತವೆ. ಪ್ರತಿಮಾತಿನ ಸಂದರ್ಭಕ್ಕೂ ಅಣಿ ಮುತ್ತಿನಂತಹ ಗಾದೆಗಳನ್ನು ಹಳ್ಳಿಗರು ಜೋಡಿಸುತ್ತಾರೆ. ಈ ಗಾದೆಗಳು ಒಂದು ಭಾಷೆಯ ವಿಶಿಷ್ಟ ಒಡೆತನವಲ್ಲ. ಮತ್ತು ಈ ಗಾದೆಗಳನ್ನು ಸಾಮೂಹಿಕವಾಗಿ ನೋಡಿದಾಗ ಅವುಗಳಲ್ಲಿ ಅನೇಕವಕ್ಕೆ ಸಾಮ್ಯ ಇರುವುದು ಕಂಡು ಬರುತ್ತದೆ. ಕೆಲವು ಸಮಯಗಳಲ್ಲಿ ವಸ್ತು ಮತ್ತು ವಿಷಯ ಬೇರೆಯಾದರೂ ಭಾವ ಒಂದೇ ಆಗಿರುತ್ತದೆ.

ಗಾದೆಯ ಮಾತುಗಳು ಅರ್ಥಗರ್ಭಿತ ಹಾಗೂ ಸತ್ಯ ಗರ್ಭಿತವಾಗಿವೆ. ಜೀವನದ ಒರೆಗಲ್ಲಿನ ಮೇಲೆ ಉಜ್ಜಿ ಅನುಭವದಿಂದ ಹೊರಚಿಮ್ಮಿದ ಮಾತುಗಳಿವು. ಆದುದರಿಂದಲೇ "ಗಾದೆಯ ಮಾತು ವೇದಕ್ಕೆ ಸಮಾನ'' ಎಂದು ಹೇಳುತ್ತಾರೆ. ಯಾವುದಾದರೂ ಒಂದು ವಿಷಯದ ವಿವರಣೆ, ಅದನ್ನು ಇನ್ನೊಬ್ಬರಿಗೆ ಚೆನ್ನಾಗಿ ಮನಕ್ಕೆ ನಾಟುವಂತೆ ಹೇಳಬೇಕಾಗಿದ್ದರೆ ನಾವು ಗಾದೆಗಳ ನೆರವನ್ನು ಅನಿವಾರ್ಯವಾಗಿ ತೆಗೆದುಕೊಳ್ಳಬೇಕಾಗುತ್ತದೆ. ಯಾವವಿಚಾರವಾಗಿ ನಾವು ಮಾತನಾಡಬೇಕಾಗಿದ್ದರೂ 'ಅದೇನೋ ಹೇಳ್ತಾರಲ್ಲ ಆ ಗಾದೆಯಂತೆ....'' ಎಂತಲೇ ಪೀಠಿಕೆ ಹಾಕಿಕೊಂಡು ಮಾತಿಗಾರಂಭಿಸುತ್ತೇವೆ.

ಗೂಬೆ ಅಪಶಕುನಕ್ಕೆ ಹೆಸರು ಹೊತ್ತ ಪಕ್ಷಿ. ಅದರ ಕಂಠ ಕರ್ಕಶ. ಹೀಗಿರುವಾಗ ಮದುವೆ ಮುಂತಾದ ಶುಭ ಕಾರ್ಯಗಳಲ್ಲಿ ಗೂಬೆಯಿಂದ ಸೋಬಾನೆಯನ್ನು ಯಾರಾದರೂ ಹಾಡಿಸುತ್ತಾರೆಯೆ ? ಇದನ್ನು ನಿರೂಪಿಸಲು ("ಗೂಬೆಕೈಲಿ ಸೋಬಾನೆ ಹಾಡಿಸಿದ ಹಾಗೆ") ಎಂದು ಗಾದೆ ಹೇಳುತ್ತಾರೆ. ಕೆಲಸಕ್ಕೆ ತಕ್ಕಂಥ ಮನುಷ್ಯನನ್ನು ಆರಿಸಿಕೊಳ್ಳದಿದ್ದರೆ ಹೀಗಿರುತ್ತದೆ ಎಂಬುದನ್ನು ಈ ಗಾದೆ ಬಹು ಚೆನ್ನಾಗಿ ನಿರೂಪಿಸುತ್ತದೆ.

ಯಾವುದಕ್ಕೇ ಆಗಲಿ ಅನುಭವಬೇಕು. ಒಬ್ಬರ ಕಷ್ಟವನ್ನು ನಾವು ಅರಿತುಕೊಳ್ಳಬೇಕಾದರೆ ಆ ಕಷ್ಟವನ್ನು ಒಂದುಸಾರಿಯಾದರೂ ಅನುಭವಿಸಿರಬೇಕು. ಹೀಗೆ ಅನನುಭವಿಯಾದವರಬಗ್ಗೆ "ಗೊಡ್ಡಿಗೇನು ಗೊತ್ತು ಹೆರೋಸಂಕಟ" ಎಂದು ಹೇಳುತ್ತಾರೆ. ಬಂಜೆಯಾದವಳು ಪ್ರಸವವೇದನೆ ವಿಚಾರವಾಗಿ ಎಂಥ ಉದ್ದಾಮ ಭಾಷಣ ಮಾಡಿದರೂ ಹಾಸ್ಯಾಸ್ಪದವಾಗಿರುತ್ತದೆ.

ಪರನಿಂದೆ, ಆತ್ಮಸ್ತುತಿ ಇದು ಮನುಷ್ಯನ ಸಾಮಾನ್ಯ ಗುಣ. ಇದರಂತೆ ಇತರರ ಮೇಲಿನ ಚಾಡಿಮಾತುಗಳನ್ನು ಕೇಳಲು ಅವನ ಕಿವಿ ನಿಮಿರುತ್ತದೆ. ಹೀಗಾಗಿ ಚಾಡಿಕಾರನನ್ನು ಎಲ್ಲರೂ ಆದರಿಸುತ್ತಾರೆ. ಅವನ ಬೆನ್ನು ತಟ್ಟಿ ಭಲಾ ಎನ್ನುತ್ತಾರೆ. ಆದ್ದರಿಂದ ("ಚಾಡಿಕಾರನಿಗೆ ಊರೆಲ್ಲಾ ನೆಂಟರು") ಎಂದು ಹೇಳುತ್ತಾರೆ.

ಈಗಿನ ಕಾಲದಲ್ಲಿ ಮಕ್ಕಳೇ ತಂದೆತಾಯಿಗಳಿಗೆ ವಿಧೇಯರಾಗಿ ನಡೆದುಕೊಳ್ಳುವುದಿಲ್ಲ. ಹೀಗಿರುವಾಗ ದತ್ತು ಮಗ ಆರಿಸಿಕೊಂಡ ತಂದೆಗೆ ಎಷ್ಟರಮಟ್ಟಿಗೆ ನಡೆದುಕೊಂಡಾನು? ಕೇವಲ ಮುದುಕನ ಗಂಟು ಹೊಡೆಯಲು ಅವನು ಮುದುಕನಿಗೆ ದತ್ತಾಗಿರುತ್ತಾನೆ. ಮುದುಕನಿಗಿಂತ ಮುದುಕನ ಹಣದ ಮೇಲೆ ಅವನಿಗೆ ಪ್ರೀತಿ ಹೆಚ್ಚು. ಇದನ್ನು ಅತಿಸ್ವಾರಸ್ಯವಾಗಿ ನಿರೂಪಿಸಲು ("ದತ್ತು ಮಗನಿಗೇಕೆ ಪಿತೃಭಕ್ತಿ" ಎಂದು ಹೇಳುತ್ತಾರೆ.

ಮನುಷ್ಯನಾಗಿ ಹುಟ್ಟಿದವನು ತಾನು ಮಾಡಿದ್ದನ್ನು ಭೋಗಿಸಲೇ ಬೇಕು. ಯಾವುದು ನಮ್ಮ ಕೈಬಿಟ್ಟರೂ ಕರ್ಮ ಕೈಬಿಡದು. ಅದು ಬೆನ್ನಟ್ಟಿಕೊಂಡು ಬರುತ್ತಲೇ ಇರುತ್ತದೆ. ಯಾರಾದರೂ ನಮಗೆ ಸಾಲ ಕೊಟ್ಟವರು, ಅಥವಾ ತಮ್ಮ ಕೆಲಸ ಸಾಧಿಸಿಕೊಳ್ಳಲು ನಮ್ಮ ಬೆನ್ನು ಹತ್ತಿದ್ದರೆ "ಕರ್ಮ ಬೆನ್ನು ಹತ್ತಿದ ಹಾಗೆ ಬೆನ್ನು ಹತ್ತಿದ್ದಾನೆ'' ಎಂದು ಹೇಳುತ್ತೇವೆ ಇದರಂತೆ ಕರ್ಮವನ್ನು ಎಲ್ಲರೂ ಭೋಗಿಸಲೇಬೇಕೆಂಬುದನ್ನು ''ದೇವರ ಮಗನಾದರೂ ಮಾಡಿದ್ದೆ ಉಣಬೇಕು'' ಎಂತ ಹೇಳುತ್ತೇವೆ. ಈ ಮಾತಿನ ಅರ್ಥವನ್ನು ಇನ್ನೊಂದುರೀತಿಯಲ್ಲಿ ಹೇಳುವುದೂ ಉಂಟು. ಕರ್ಮದಂತೆ ಅದೃಷ್ಟವನ್ನು ನಾವು ಆಚರಿಸಲಾಗುವುದಿಲ್ಲ. ಅನೇಕ ವೇಳೆ ಅದೃಷ್ಟವು ಬುದ್ಧಿಶಕ್ತಿ, ಮೇಧಾಶಕ್ತಿಗಳನ್ನು ಮೀರಿ ತನಗೆ ತಾನೇ ನಿಲ್ಲುತ್ತದೆ. ಇಂಥ ಹೀನ ಅದೃಷ್ಟದವರನ್ನು ನೋಡಿ "ಬುದ್ಧಿ ಬ್ರಹ್ಮಾಂಡ ಆಳಬೇಕು ಅನ್ನುತ್ತದೆ, ಆದರೆ ಅದೃಷ್ಟ ಕತ್ತೆ ಕಾಯಿಸುತ್ತದೆ.'' ಬ್ರಹ್ಮಾಂಡವನ್ನು ಆಳುವಷ್ಟು ಬುದ್ಧಿ ಇರುವ ಮನುಷ್ಯ ಕತ್ತೆ ಕಾಯುವಂಥ ಹೀನ ಸ್ಥಿತಿಗಿಳಿಯುವ ಸಂದರ್ಭ ಒದಗುತ್ತದೆ, ಎಂಬುದೇ ತಾತ್ಪರ್ಯ.

ಮಕ್ಕಳನ್ನು ಪಡೆಯುವುದು ಅವು ನಮ್ಮ ಮುಪ್ಪಿನಕಾಲದಲ್ಲಿ ದುಡಿದು ಹಾಕಲೆಂದು. ಆದರೆ ನಾವು ಮುಪ್ಪಿನಕಾಲದಲ್ಲಿ ಮಕ್ಕಳನ್ನು ಪಡೆದರೆ ಅವು ನಮಗೆ ದುಡಿದು ಹಾಕಿಯಾವೆಂಬ ಆಸೆ ಇಟ್ಟುಕೊಳ್ಳುವುದೇ ಬೇಡ. ಆ ಮಕ್ಕಳನ್ನು ಹೊತ್ತುಕೊಂಡು ತಿರುಗುವದೊಂದೇ ಲಾಭ. ಇದನ್ನು ನಿರೂಪಿಸಲು "ಮುಪ್ಪಿನ ಕಾಲದ ಮಗ ಹೆಗಲಿಗೆ ಭಾರ'' ಎಂದು ಹೇಳುತ್ತಾರೆ.

ಗಾಂಗೇಯ-ಭೀಷ್ಮಾಚಾರ್ಯರು-ಅತಿ ಶೀತಲ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರು. ಶೀತಸಂಬಂಧ ಕಾಹಿಲೆಗಳಿಂದ ಅವರು ಬಳಲುವುದು ಸ್ವಾಭಾವಿಕ. ಸದಾ ಕಾಹಿಲೆ ಅನುಭವಿಸುತಿ

ರುವವರನ್ನು ನೋಡಿ "ಭೀಷ್ಮಾಚಾರ್ಯರಿಗೆ ಸದಾ ನೆಗಡಿ" ಎಂತ ಹೇಳುತ್ತಾರೆ.

ಇಬ್ಬರು ಹೆಂಡತಿಯರನ್ನು ಮದುವೆ ಮಾಡಿಕೊಂಡಿರುವವನಿಗೆ ಹಿರಿಯ ಹೆಂಡತಿಯನ್ನು ಕಂಡರೆ ಅಷ್ಟಕ್ಕಷ್ಟೆ. ಅವಳ ಮೇಲಣ ಪ್ರೀತಿ ಕುಗ್ಗಿದ್ದರಿಂದಲೇ ಅವನು ಇನ್ನೊಬ್ಬಳನ್ನು ಮದುವೆಯಾಗಿ ರುತ್ತಾನೆ. ಹಿರಿಯ ಹೆಂಡತಿಯ ಒಳ್ಳೆಯ ಗುಣಗಳಾವುವೂ ಅವನ ಕಣ್ಣಿಗೆ ಬೀಳುವುದಿಲ್ಲ. ಅವಳು ಎಂಥ ಚೆಲುವೆಯಾಗಿದ್ದರೂ ಅದು ಅವನಿಗೆ ತಿಳಿಯುವದಿಲ್ಲ. ಕಿರಿಯ ಹೆಂಡತಿ ಅವನಿಗೆ ಸೌಂದರ್ಯದ ಗಣಿ. ಅವಳ ತಪ್ಪು ತಡೆಗಳೆಲ್ಲಕ್ಕೂ ಅವನು ಕುರುಡ. ಈ ಕಾರಣ ದಿಂದಲೇ "ಕಿವಿಹರಕಿಯಾದರೂ ಕಿರಿ ಹೆಂಡತಿ ಅಲ್ಲವೇ?" ಎಂಬ ಗಾದೆ ಮಾತು ಹೇಳುತ್ತಾರೆ.

ಯಾವುದಾದರೂ ಒಂದು ಕೆಲಸವನ್ನು ಅತಿ ಸ್ವಲ್ಪ ಜನರು ಮಾಡಬಹುದಾಗಿರುತ್ತದೆ. ಆದರೆ ಹೆಚ್ಚು ಜನರು ಸೇರಿ ಆ ಕೆಲಸ ವನ್ನು ಪೂರೈಸದೆ ಹದಗೆಡಿಸುವುದೂ ಉಂಟು. ಇದನ್ನು ತಿಳಿ ಹೇಳಲು ಅನೇಕ ಗಾದೆ ಮಾತುಗಳಿವೆ. ಅವುಗಳಲ್ಲಿ ಮುಖ್ಯವಾದ ಮೂರನ್ನು ಮಾತ್ರ ಆರಿಸಿಕೊಂಡಿದ್ದೇನೆ. "ಹಲವು ಜನ ಹೊಲೆ ಯರು ಸೇರಿ ತೊಗಲು ಹದಗೆಡಿಸಿದಹಾಗೆ" "ಒಂದು ಸೂಜೀನ ಒಂಬತ್ತು ಜನ ಹೊತ್ತರು" "ಮೇಯೋದು ಮೂರು ಆಡು ಕಾಯೋದು ಒಂಬತ್ತು ಜನ"

ಮೂರ್ಖನ ಸ್ನೇಹಕ್ಕಿಂತ ಬುದ್ಧಿವಂತನೊಂದಿಗೆ ಜಗಳವಾಡು ವುದೇ ಲೇಸೆಂಬುದನ್ನು "ಸಗಣಿಯವನ ಸ್ನೇಹಕ್ಕಿಂತ ಗಂಧದವ ನೊಡನೆ ಗುದ್ದಾಟವೇ ಲೇಸು" ಎಂದು ಹೇಳುತ್ತಾರೆ. ಗಂಧದವ ನೊಡನೆ ಗುದ್ದಾಡಿದರೆ ನಮಗೆ ಏಟುಬಿದ್ದರೂ ನಮ್ಮ ಮೈ ಗಂಧದ ವಾಸನೆಯಿಂದ ಕೂಡಿರುತ್ತದೆ.

ಹುಟ್ಟುಗುಣ ಮನುಷ್ಯನ ಜೊತೆಗೆ ಛಾಯಾನುವರ್ತಿಯಾಗಿ ಸಾಗಿರುತ್ತದೆ. ಅವನು ಎಷ್ಟೇ ವಿದ್ಯೆ ಕಲಿಯಲಿ, ಅವನ ಬುದ್ಧಿ

ಎಷ್ಟೇ ಬೆಳೆಯಲಿ, ಅವನ ಹುಟ್ಟುಗುಣದಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಇಂಥ ಸಂದರ್ಭವನ್ನು "ಹೆಗ್ಣ ದೇಶಾಂತರ ಹೋದರೂ ನೆಲಾ ಕೆರೆಯುವುದು ಬಿಡಲಿಲ್ಲ" ಎಂದು ಹೇಳುತ್ತಾರೆ.

ಇತರರನ್ನು ಮೆಚ್ಚಿಸಲು ಮನುಷ್ಯ ವಿಪರೀತ ಕಷ್ಟಪಡುತ್ತಾನೆ. ತನ್ನ ತೊಂದರೆ ತಾಪತ್ರಯಗಳೇನೇ ಇರಲಿ ತಾನು ಸಿರಿವಂತನೆಂದೂ ಅನುಕೂಲಸ್ಥನೆಂದೂ ತೋರ್ಪಡಿಸಿಕೊಳ್ಳಲು ಹೆಣಗುತ್ತಾನೆ. ತಾನು ಮನೆಯಲ್ಲಿ ತಿನ್ನುವುದು ಕದನ್ನವಾದರೂ ಪಂಚಭಕ್ಷ್ಯ ಪರಮಾನ್ನವನ್ನೇ ಉಂಡಿದ್ದಾಗಿ ಹೇಳುತ್ತಾನೆ. ಇಂತಹವರನ್ನು ನೋಡಿ "ಉಣ್ಣೋದು ಗಂಜಿ ಮುಕ್ಕಳಿಸೋದು ಪನ್ನೀರು" ಎಂದು ಹೇಳುತ್ತೇವೆ. ಪನ್ನೀರಿಗೆ ಹಾಕುವ ಹಣವನ್ನೇ ಅಡಿಗೆ ಪದಾರ್ಥಗಳಿಗೆ ಹಾಕಿದರೆ ಅವನು ಸುಖಭೋಜನ ಮಾಡಬಹುದು. ಆದರೆ ತನ್ನ ಅಡಿಗೆ ಮನೆಯ ಕತ್ತಲುಗವಿಯಲ್ಲಿ ತಾನು ಊಟಮಾಡಿದ್ದು ತನಗೆ ಮಾತ್ರ ತಿಳಿದಿರುತ್ತದೆ. ಕೈತೊಳೆಯಲು ಹೊರಬಂದಾಗ ಪನ್ನೀರು ಮುಕ್ಕಳಿಸಿದರೆ ಇತರರು ತನ್ನನ್ನು ನೋಡಿ ಹೊಗಳಲಿ ಎಂಬ ಭ್ರಾಂತಿ ಅಷ್ಟೆ.

ಬಡವನನ್ನು ಕಂಡರೆ ಎಂತಹ ಕ್ಷುಲ್ಲಕ ಮನುಷ್ಯನಾದರೂ ಅಸಡ್ಡೆಯಿಂದ ಕಾಣುತ್ತಾನೆ. ಬಡವನ ಬಡತನಕ್ಕೆ ಪ್ರಾಮುಖ್ಯವೇ ವಿನಾ ಅವನಲ್ಲಿರುವ ಉತ್ತಮಗುಣಗಳಿಗಲ್ಲ. ದೇವರಿಗೆ ಬಡವರು ಸಿರಿವಂತರು ಇಬ್ಬರೂ ಒಂದೇ ಆದರೆ ದೇವರ ಪೂಜಾಸಾಧನವಾದ ಬಿಲ್ವಪತ್ರೆಯು ಬಡವನನ್ನು ಕಂಡರೆ ಅಲಕ್ಷ್ಯ ತೋರುತ್ತದೆ, ಕೋಪಗೊಳ್ಳುತ್ತದೆ. ಇದನ್ನು ನಿರೂಪಿಸಲು "ಬಡವನ್ನ ಕಂಡರೆ ಬಿಲ್ಪತ್ರೆಯೂ ಬುಸ್ಸೆನ್ನುತ್ತದೆ" ಎಂದು ಹೇಳುತ್ತೇವೆ.

ಅಭ್ಯಾಸ ಇಲ್ಲದವರು ಯಾವ ಕೆಲಸವನ್ನೇ ಆಗಲಿ ಸಮರ್ಪಕವಾಗಿ ಮಾಡಲು ಸಾಧ್ಯವಿಲ್ಲ ಇದನ್ನು ತಿಳಿಸಲು "ಹೊಸ ಪೂಜಾರಿ ನಾಯಿ ತುಳಸಿ ಕುಯ್ದ ಹಾಗೆ" "ಅಭ್ಯಾಸ ಇಲ್ಲದ

ಬ್ರಾಹ್ಮಣ ಹೋಮಾ ಮಾಡಲು ಹೋಗಿ ಗಡ್ಡ ಮೀಸೆ ಸುಟ್ಟು ಕೊಂಡ ಹಾಗೆ" ಎಂತಲೂ ಹೇಳುತ್ತೇವೆ.

ಯಾವ ಕೆಲಸ ಮಾಡುವುದಕ್ಕೆ ಹೋದರೂ ಅದನ್ನು ಚೆನ್ನಾಗಿ ಮಾಡುವುದಿರಲಿ, ಅಲ್ಲಿ ಏನೋ ಪೇಚನ್ನು ಮೈಮೇಲೆ ತಂದುಹಾಕಿ ಕೊಳ್ಳುವವರೂ ಇದ್ದಾರೆ, ಇಂಥ ಸಂದರ್ಭದಲ್ಲಿ "ನಮಾಜು ಮಾಡಲು ಹೋಗಿ ಮಸೀದೆಯನ್ನು ಮೈಮೇಲೆ ಹಾಕಿಕೊಂಡ" ಎಂದು ಹೇಳುತ್ತಾರೆ.

ಮನೆಯಲ್ಲಿ ದುಡಿಯುವವನು ಒಬ್ಬನಾಗಿ ತಿನ್ನುವವರು ಹತ್ತು ಮಂದಿಯಾದರೆ ಆ ಮನೆ ಊರ್ಜಿತವಾಗುವುದು ಕಷ್ಟ. ಅಲ್ಲದೆ ನಮ್ಮಲ್ಲಿ ಯಾವನಾದರೂ ಧನಿಕನಾದರೆ ಅಥವಾ ದೊಡ್ಡ ಸಂಬಳ ತರುವ ನೌಕರನಾದರೆ ಅವನ ಮನೆ ಒಂದು ಧರ್ಮಛತ್ರವಾಗು ತ್ತದೆ. ಅವನ ಬಂಧು ಬಳಗ ಅವನನ್ನು ಅರಸಿಕೊಂಡು ಬರುತ್ತಾರೆ. "ಮನೆಗೆ ನಂಟ ಮೃತ್ಯು, ಕುಂಟ ದಂಡಿಗೆ ಮೃತ್ಯು" ಎಂದು ಹೇಳುತ್ತಾರೆ. ಕೆಲಸವಿಲ್ಲದೆ ಊಟಮಾಡಿಕೊಂಡು ಕಾಲಹರಣ ಮಾಡುವ ನಂಟನಂತೆ, ಸೇನೆಯಲ್ಲಿರುವ ಕುಂಟನು ಕಂಟಕಪ್ರಾಯ ವಾಗುತ್ತಾನೆ. ಸೇನೆಯಲ್ಲಿರುವ ಕುಂಟನಿಂದ ಉಪಕಾರಕ್ಕಿಂತ ಉಪದ್ರವವೇ ಹೆಚ್ಚು.

ಇತರರಲ್ಲಿರುವ ದುರ್ಗುಣಗಳು ನಮ್ಮ ಕಣ್ಣಿಗೆ ತಟ್ಟನೆ ಬೀಳು ತ್ತವೆ. ಆ ದುರ್ಗುಣಗಳಿಂದ ಆ ಮನುಷ್ಯ ಹಾಳಾಗಿ ಹೋಗು ತ್ತಾನೆಂದು ಹೇಳುತ್ತೇವೆ. ಆದರೆ ಆ ದುರ್ಗುಣಗಳೇ ನಮ್ಮಲ್ಲಿ ಮನೆ ಮಾಡಿರುತ್ತವೆ. ಅವುಗಳಿಂದ ಕೇಡಾಗುವುದೆಂಬ ಅರಿವು ನಮಗಿರು ವುದಿಲ್ಲ. "ನಮ್ಮನೆ ಬೆಂಕಿಯಾದರೇನು ಸುಡೋದು ಬಿಟ್ಟೇತೆ" ಎಂದು ಈ ಸಂದರ್ಭದಲ್ಲಿ ಹೇಳುತ್ತೇವೆ.

ಅತ್ತೆಮನೆಯಲ್ಲಿರುವ ಸೊಸೆ ಎಷ್ಟು ತೊಂದರೆಯಿದ್ದರೂ ಅವಳ ದನ್ನು ಮೌನವಾಗಿ ಅನುಭವಿಸಬೇಕು ತನ್ನ ದುಃಖವನ್ನು

ತವರುಮನೆಯಲ್ಲಿ ಆಕೆ ಎಂದೆಂದಿಗೂ ತೋಡಿಕೊಳ್ಳಲಾರಳು. ಕರ್ಣಾಕರ್ಣಿಯಾಗಿ ಸೊಸೆ ತಮ್ಮ ಮನೆಯನ್ನು ದೂರಿಕೊಂಡ ಳೆಂದು ಅತ್ತೆಯ ಮನೆಯವರಿಗೆ ತಿಳಿದರೆ ಭೂಮಿ ಆಕಾಶ ಒಂದು ಮಾಡಿಬಿಡುತ್ತಾರೆ ಆಮೇಲೆ ಆ ಸೊಸೆ ಅತ್ತೆಯ ಮನೆಯಲ್ಲಿ ನರಕ ವನ್ನೇ ಅನುಭವಿಸಬೇಕಾದೀತು. "ಅತ್ತೇ ಮನೇಲಿ ಹೇಗಿರುವೆ ಮಗಳೆ ಅಂದರೆ, ಚಿಲಕಕ್ಕೆ ಮೊಳಕೈ ತಗುಲಿದಾಗದ ಹಾಗೆ" ಮೊಳಕೈಗೆ ಚಿಲಕ ತಗುಲಿದರೆ ಅದರ ನೋವನ್ನು ಇನ್ನೊಬ್ಬರಿಗೆ ಹೇಳಲು ತಿಳಿಯುವುದಿಲ್ಲ ಮತ್ತು ಇತರರಿಗೆ ಆ ನೋವು ಕಾಣು ವುದೂ ಇಲ್ಲ.

ಯಾವುದಕ್ಕೇ ಆಗಲಿ ಒಂದು ಪ್ರಮಾಣ ಇರಬೇಕು, ಒಂದು ಮಿತಿ ಇರಬೇಕು. ಅದು ಅಳತೆತಪ್ಪಿ ಕಡಿಮೆ ಇರಬೇಕಾದ ಪದಾರ್ಥ ಅತಿ ಹೆಚ್ಚಾಗಿ, ಹೆಚ್ಚಾಗಿರಬೇಕಾದ ಪದಾರ್ಥ ಕಮ್ಮಿ ಯಾದರೆ "ಕಾಯಿಗಿಂತ ಜುಟ್ಟೇ ಭಾರ" ಎಂದು ಹೇಳುತ್ತಾರೆ. ಈ ಗಾದೆಯನ್ನೇ ಹೋಲುವ ಇನ್ನೆರಡು ಗಾದೆಗಳಿವೆ. "ಮೂಗಿ ಗಿಂತ ಮೂಗುತಿ ಭಾರ" "ಮಂತ್ರಕ್ಕಿಂತ ಉಗುಳು ಘನ."

ಸಿರಿವಂತನ ಮನೆಯಲ್ಲಿ ಕಿರಿಯವನಾಗಿ ಹುಟ್ಟಿದರೆ ತುಂಬಾ ಅನಾನುಕೂಲ. ಅವನಿಗೆ ವೆಚ್ಚಕ್ಕೆ ಹಣ ದೊರೆಯುವುದು ದುರ್ಲಭವಾಗುತ್ತದೆ. ಅವನು ತನ್ನ ವೆಚ್ಚಕ್ಕೆ ಹಣ ಒದಗಿಸಿ ಕೊಳ್ಳಲು ನಾನಾ ಮಾರ್ಗಗಳನ್ನು (ಸರಿಯಾದ ಮಾರ್ಗವನ್ನು ಬಿಟ್ಟು) ಹುಡುಕಬೇಕು. ಪಾಲಾಗುವ ಸಮಯದಲ್ಲಿ ಹಿರಿಯ ಅಣ್ಣಂದಿರೆಲ್ಲ ಆದಷ್ಟು ಹೆಚ್ಚು ಗಿಟ್ಟಿಸಿಕೊಳ್ಳುತ್ತಾರೆ. ಕಿರಿಯ ತಮ್ಮನಿಗೆ ನ್ಯಾಯವಾದ ಪಾಲು ಸಲ್ಲುವುದಿಲ್ಲ. ಇದರಂತೆ ಬಡವರ ಮನೆಯಲ್ಲಿ ಹಿರಿಯ ಮಗನಾಗಿ ಹುಟ್ಟಿದರೆ ಸಂಸಾರದ ಹೊರೆಯೆಲ್ಲಾ ಅವನ ತಲೆಯಮೇಲೆ ಬೀಳುತ್ತದೆ. ತೂಗದ ತಕ್ಕಡಿಯನ್ನು ತೂಗಿಸುವುದರಲ್ಲಿ ಅವನು ಸುಸ್ತಾಗುತ್ತಾನೆ. ಅದಕ್ಕೆ "ಹಣವಂತನ

ಮನೆಯಲ್ಲಿ ಕಿರಿಯವನೂ, ಒಡವನ ಮನೆಯಲ್ಲಿ ಹಿರಿಯವನೂ ಆಗಬಾರದು" ಎಂದು ಹೇಳುತ್ತಾರೆ

ಯಾವನೋ ಮಾಡಿದ ತಪ್ಪಿಗೆ ಯಾರನ್ನೋ ದೂರುವಾಗ "ಮಾಡ್ದೋನು ಕಂಬಳಿಯವನು, ದೂರೋದು ದಾಪಟಿಯವನ್ನ"/ ಎನ್ನುತ್ತೇವೆ

ಯಾವುದಾದರೂ ಒಂದು ವಿಷಯದಲ್ಲಿ ನಮಗೆ ಜಿಹಾಸೆ ಹುಟ್ಟಿದರೆ ಅಥವಾ ಅದನ್ನು ಮಾಡಲು ಮನಸ್ಸು ಅಥವಾ ಶಕ್ತಿ ಇಲ್ಲದಿದ್ದರೆ "ಮುಪ್ಪಿನ ಸೂಳೆ ಮಹಾ ಪತಿವ್ರತೆ" ಎಂದು ಹೇಳುತ್ತೇವೆ.

"ಮನೆ ಗೆದ್ದು ಮಾರುಗೆಲ್ಲು" ಎಂಬ ಗಾದೆ ಮಾತು ಇದೆ ತಾನೆ? ಆದರೆ ಇತರರನ್ನು ಮೆಚ್ಚಿಸಲು ಅಥವಾ ಕೀರ್ತಿಕಾಂಕ್ಷೆ ಯಿಂದ ದುಡಿಯುವವನಿಗೆ "ಊರು ದನಾನೆಲ್ಲಾ ಕಾಯ್ದು ದೊಡ್ಡ ಗೌಡ ಅನ್ನಿಸಿಕೊಂಡಂತೆ" ಎಂದು ವ್ಯಂಗವಾಗಿ ಹೇಳುತ್ತೇವೆ.

ನಾವು ನಮ್ಮ ತಾಪತ್ರಯಗಳಲ್ಲಿ ಬಳಲಿ ಬೆಂಡಾಗಿರುವಾಗ ಇತರರು ಬಂದು ನಮ್ಮನ್ನು ಕಾಡಿದರೆ ಅಥವಾ ಬೇಡಿದರೆ "ತುಂಬಿದ ಸಂತೇಲಿ ನನ್ನ ತುಂಡಂಗಿ ಮಗನ್ನ ಕಂಡ್ರಾ" ಎಂದು ಹೇಳುವ ವಾಡಿಕೆ ಇದೆ.

ಶ್ವಪಚ ಮನುಷ್ಯನಿಗೆ ತನ್ನ ದೇಹವೇ ತನಗೆ ಭಾರವಾಗಿರುತ್ತದೆ. ಅವನು ಸಮಾಜದಲ್ಲಿ ಎಲ್ಲರಂತೆ ತಿರುಗಾಡಲು ಅರ್ಹತೆ ಪಡೆದಿರುವುದಿಲ್ಲ. ಎಲ್ಲರಂತೆ ಮದುವೆಮಾಡಿಕೊಂಡು ಸಂಸಾರಸ್ಥನಾಗಿರಲೂ ಅವನು ಯೋಗ್ಯತೆಪಡೆದಿರುವದಿಲ್ಲ. ಇಂಥ ಮನುಷ್ಯನಿಗೆ ಒಬ್ಬ ಹೆಂಡತಿಯೇ ಹೊರೆಯಾಗಿರುವಾಗ, ಅವನು ಇನ್ನೊಬ್ಬ ಹೆಂಡತಿ-ಯನ್ನು ಮದುವೆಯಾಗಲು ಹವಣಿಸಿದರೆ "ಸಿಂಬಳ ಬುರುಕನಿಗೆ ಯಾಕೆ ಇಬ್ಬಾರು ಹೆಂಡ್ರು" ಎಂದು ಹೇಳುತ್ತಾರೆ. ಅಂದರೆ

ಯಾವನಾದರೂ ತನ್ನ ಅಂತಸ್ತಿಗಿಂತ ಅತಿ ಹೆಚ್ಚಾದುದನ್ನು ಬಯಸಿದರೆ ಈ ಗಾದೆ ಹೇಳುತ್ತಾರೆ.

ಸರಸ್ವತಿ—ಲಕ್ಷ್ಮಿಯರಿಗೆ ಯಾವಾಗಲೂ ವೈರ. ವಿದ್ಯೆ ಮತ್ತು ಹಣ ಒಂದೆಡೆಯಲ್ಲಿ ಸೇರುವುದು ಅಪರೂಪ. ಹೆಚ್ಚು ಓದಿದ ಮನುಷ್ಯ ಇನ್ನೂ ಹೆಚ್ಚಾಗಿ ಓದುತ್ತಾನೆ. ವಿದ್ಯೆಗೆ ಅವನಿಗಿರುವ ದಾಹ ಎಂದಿಗೂ ತಣಿಯದು. ದುಡಿಮೆಯ ಹವ್ಯಾಸವನ್ನೇ ಅವನು ಮರೆತುಬಿಡುತ್ತಾನೆ. ಇಂಥವನನ್ನು ನೋಡಿದಾಗ "ಅಧ್ಯಯನ ಓದೋನಿಗೆ ಮಧ್ಯಾಹ್ನಕ್ಕೆ ಹಿಟ್ಟಿಲ್ಲ" ಎಂದು ಹೇಳುತ್ತೇವೆ.



# ಎಲ್ಲಾ ನೀರು ಕುಡಿದಂತೆ

ನಮ್ಮ ಚಂದ್ರನ ಹುಟ್ಟಿದ ಹಬ್ಬ. ಮನೆಯಲ್ಲಿ ಸಂಜೆ ಆರತಿ ಸಡಗರ ಭರದಿಂದ ಸಾಗಿತ್ತು. ಪಕ್ಕದ ಮನೆ ವೆಂಕಟೇಶ ನನ್ನನು ಕೂಗಿದ. "ಚಂದ್ರೂಗೆ ಸಂಜೆ ಆರತಿಯಂತೆ. ತುಂಬಾ ಸಂತೋಷ ಒಂದು ಒಳ್ಳೇ ಪೆಟ್ರೋಮ್ಯಾಕ್ಸ್ ನನ್ನಲ್ಲಿದೆ ಹಚ್ಚಿಡಿ. ನಮ್ಮೂರಿಗೆ ಎಲೆಕ್ಟ್ರಿಕ್ ಲೈಟ್ ಇನ್ನೂ ದಯಮಾಡಿಸಿಲ್ಲ. ಹಳೇಕಾಲದ ಸಮಯ, ಲಾಟೀನು ಚೆನ್ನಾಗಿರೊಲ್ಲ. ಪೆಟ್ರೋಮ್ಯಾಕ್ಸ್ ಹಚ್ಚಿದರೆ ಬಹಳ ಸೊಗಸಾಗಿರುತ್ತೆ." ಅಂತ ಹೇಳಿದ.

ಸ್ವವಿಷಯ ಸ್ವಲ್ಪ ಹೇಳಬೇಕಾಗುತ್ತೆ. ಯಾವ ತಂತ್ರವನ್ನು ಕಂಡರೂ ನನಗೆ ದಿಗಿಲು ಮತ್ತು ಅನುಮಾನ. ಆಯತ ಹೊತ್ತಿನಲ್ಲಿ ಅವು ಕೆಟ್ಟುಹೋಗುತ್ತವೆಂದು ನನ್ನ ನಂಬಿಕೆ. ನನ್ನ ಕಲ್ಪನಾ ಸ್ವಾತಂತ್ರ್ಯವನ್ನು ಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲವಷ್ಟೆ? ಆದರೂ ಲೈಟಿನ ಬೆಳಕಿನಲ್ಲಿ ಕರಿಯ ಚಂದ್ರು ಬೆಳ್ಳಗೆ ಕಾಣಲಿ ಅಂತ ನನ್ನ ದುರಾಸೆ." ಏನೋಪ್ಪ ನಿನ್ನ ಸಂತೋಷಕ್ಕೆ ನಾನೇಕೆ ಅಡ್ಡಿ ಬರಲಿ" ಎಂತ ಹೇಳಿದೆ.

ಸಂಜೆ ಐದುಗಂಟೆಗೇನೇ ವೆಂಕಟೇಶ ನಮ್ಮ ಮನೆಗೆ ಬಂದ. ಹಳೆಯಮುರಕು ಮರದ ಕುರ್ಚಿಯ ಮೇಲೆ ಗಂಜಿಮಾಡಿದ ಮಗ್ಗಲು ಹಾಸಿಗೆ ಹೊದಿಸಿದ್ದರು. ಮೂರುವರ್ಷದ ಹಿಂದಿನ ಸನ್‌ಲೈಟ್ ಸೋಪಿನ ಎರಡು ಕ್ಯಾಲೆಂಡರ್‌ಗಳನ್ನು ಕುರ್ಚಿಯ ಎರಡು ಕಡೆಗಳಲ್ಲೂ ನೇತುಹಾಕಿದ್ದರು. ಮನೆ ಚೊಕ್ಕಟವಾಗಿ ಕಾಣಲೆಂದು ಇದ್ದಬದ್ದ ಸಾಮಾನುಗಳನ್ನೆಲ್ಲ ಮೂಲೆಯಲ್ಲಿ ಪೇರಿಸಿ

ಚಾಪೆ ಹೊದಿಸಿದ್ದರು. "ಏನೋ ಇಷ್ಟು ಬೆಳಕಿರುವಾಗ ದೀಪ ಹೊತ್ತಿಸಿದರೆ ಹೇಗೆ?" ಅಂತ ವೆಂಕಟೇಶನನ್ನು ಕೇಳಿದೆ. "ಎ ಆರ್. ಪಿ ಅನ್ನೋದು ಇದೆ ಯಾವುದಕ್ಕೂ ಮುಂಜಾಗ್ರತೆಯಾಗಿರಬೇಕು" ಅಂತ ವೆಂಕಟೇಶ ಹೇಳಿದ. ಅವನಿಗೆ ತಿಳಿಯದ ವಿಷಯ ಯಾವುದೂ ಇಲ್ಲ. ಬಾರದ ಕೆಲಸ ಯಾವುದೂ ಇಲ್ಲ. ಎಲ್ಲಾ ನೀರು ಕುಡಿದಷ್ಟು ಸುಲಭವಾಗಿ ಮಾಡುತ್ತಾನೆ

ಒಳ್ಳೆಯ ಕಸಬುದಾರನಂತೆ ಪೆಟ್ರೋಮ್ಯಾಕ್ಸಿನ ವಿವಿಧ ಭಾಗಗಳನ್ನೂ ನನಗೆ ಗೊತ್ತಾಗದ ರೀತಿಯಲ್ಲಿ ವಿವರಿಸಿದ. "ಕ್ಷಣಾರ್ಧದಲ್ಲಿ ಇದನ್ನು ಹೊತ್ತಿಸಿಬಿಡುತ್ತೇನೆ. ಆದರೆ ಇದನ್ನು ಮೂಲೆಯಲ್ಲಿಟ್ಟು ಬಹಳ ದಿನವಾಯಿತು. ನಮ್ಮ ಪಾತೂನ ಮದ್ವೇಲಿ ಹಚ್ಚಿದ್ದು, ಆ ಮೇಲೆ ಇದನ್ನು ಹೊರಕ್ಕೆ ತೆಗೆದೇ ಇಲ್ಲ. ಸ್ಪಿರಿಟ್ ಇದ್ದರೆ ತೆಗೆದುಕೊಂಡು ಬಾ" ಅಂತ ಹೇಳಿದ. ನಮ್ಮಜ್ಜಿಗೆ ವಾಯುಶೂಲೆಯಾದಾಗ ಒಂದಿಷ್ಟು ಸ್ಪಿರಿಟ್ ತಂದಿದ್ದರಿಂದ ಸ್ಪಿರಿಟ್ ಎಲ್ಲಾ ಗಾಳಿಗೆ ಹೋಗಿ ಎಲ್ಲೊ ತಳದಲ್ಲಿ ಕೊಂಚ ಉಳಿದುಕೊಂಡಿತ್ತು." ಸಾಕಯ್ಯ ಸಾಕು ಅದಿಷ್ಟು ಸ್ಪಿರಿಟ್‌ನಿಂದ ನೂರು ಪೆಟ್ರೋಮ್ಯಾಕ್ಸ್ ಲೈಟುಗಳನ್ನು ಹಚ್ಚಬಹುದು" ಎಂದು ಹೇಳುತ್ತ ಕಿಟಿಕಿಗೂಡಿನಲ್ಲಿದ್ದ ಬೆಂಕಿಪೊಟ್ಟಣಕ್ಕೆ ಕೈಚಾಚಿದ. ನೀರಿನಲ್ಲಿ ಬೆಂಕಿಹಾಕಿದಂತೆ "ಸೊಂಯ್" ಅಂತ ಶಬ್ದವಾಯಿತು. ಸ್ಪಿರಿಟ್‌ನಲ್ಲಿ ಸ್ಪಿರಿಟ್ ಇರಲಿಲ್ಲ ಹೋಗಲಿ ಸೀಮೆ ಎಣ್ಣೆ ತೆಗೆದುಕೊಂಡು ಬಾ ಅಂತ ಆಜ್ಞೆಯಿತ್ತ.

ಬ್ಲಾಕ್‌ಮಾರ್ಕೆಟ್ಟಿನಲ್ಲಿ ಸೀಮೆಎಣ್ಣೆಯನ್ನು ತಂದಿದ್ದೆವು ಅದನ್ನು ತರಲು ನಾನು ಪಟ್ಟ ತೊಂದರೆ ಕೊಟ್ಟ ತೆರ ನೆನೆಸಿಕೊಂಡು ಸ್ವಲ್ಪ ಅನುಮಾನಿಸಿದೆ. "ಲೈಟ್ ಹಚ್ಚೋದಕ್ಕೆ ಎಷ್ಟು ಸೀಮೆ ಎಣ್ಣೆ ಬೇಕಾಗ್ತದಯ್ಯಾ, ಸೀಸೆ ತೆಗೆದುಕೊಂಡು ಬಾ. ಸ್ವಲ್ಪ ಆದರೆ ಸಾಕು" ಎಂದು ವೆಂಕಟೇಶ ಅಭಯ ನೀಡಿದ.

ಬಚ್ಚಲು ಮನೆಯಲ್ಲಿದ್ದ ಸೀಮೆಎಣ್ಣೆ ಸೀಸೆಯನ್ನು ತಂದೆ. ಲೈಟಿನ ಬಟ್ಟಲಿಗೆ ಎಣ್ಣೆ ಸುರಿದು ಕಡ್ಡಿ ತೋರಿಸಿದ. "ಭಗ್" ಅಂತ ಹತ್ತಿಕೊಂಡಿತು. "ಇದೇನೂ ಆಗೊಲ್ಲ. ಸೀಮೆಎಣ್ಣೆ ಕಾಯ್ದು ಗ್ಯಾಸ್ ಆಗಬೇಕು. ಆಗಲೇ ಉರಿ ಇಲ್ಲದೆ ಉರಿಯುತ್ತೆ" ಎಂತ ನನಗೆ ತಿಳಿಸಿದ.

"ಮಗೂನ ಆರತಿ ದಿನ ಅಪಶಕುನವಾಯಿತು. ಅದಕ್ಕೆ ಏನಾಗುತ್ತೋ........" ಅಂತ ನನ್ನ ಹೆಂಡತಿ ಸೀರೆಯಸೆರಗಿನ ತುದಿಯನ್ನು ಕಣ್ಣಿಗೆ ಹಚ್ಚಿಕೊಂಡಳು.

ಈ ಗಲಾಟೆಯಲ್ಲಿ ಸೀಮೆಎಣ್ಣೆ ಸೀಸೆ ಕೆಳಕ್ಕುರುಳಿತ್ತು. ಒಂದು ತುಂಬಿದ ಬೆಂಕಿಪೊಟ್ಟಣ ಬರಿದಾಗಿತ್ತು.

"ಈಗ ನೋಡಿ, ಈ ಲೈಟ್ ಹಚ್ಚಲು ಇನ್ನೊಂದು ಮಾರ್ಗ ಇದೆ" ವೆಂಕಟೇಶ ಆರಂಭಿಸಿದ.

"ಇಲ್ಲ, ಎರಡು ಮಾರ್ಗಗಳಿವೆ. ಒಂದು ಹಿತ್ತಲು ಬಾಗಿಲಿನಿಂದ, ಒಂದು ಮುಂದುಗಡೆ ಬಾಗಿಲಿನಿಂದ. ಇದನ್ನು ಮೂರು ನಿಮಿಷಗಳೊಳಗಾಗಿ ಯಾವುದಾದರೂ ಒಂದು ಮಾರ್ಗವನ್ನು ಹಿಡಿ" ಅಂತ ವೆಂಕಟೇಶನಿಗೆ ಹೇಳಿದೆ.

ಪಕ್ಕದ ಮನೆ ರಾಮರಾಯರಿಂದ ಅರ್ಧಸೀಸೆ ಸೀಮೆಎಣ್ಣೆ ಪಡೆತಂದು ಲಾಟೀನು ಹಚ್ಚಿ ಅವೊತ್ತು ಚಂದ್ರೂನ ಆರತಿ ಶಾಸ್ತ್ರ ಮುಗಿಸಿದ್ದಾಯಿತು.



# ಅಶ್ವಮೇಧ

ಬಸ್ಸು, ಬೈಸಿಕಲ್‌ಗಳು ಜಾರಿಗೆ ಬರದೆ ಇರುವುದಕ್ಕೆ ಮುಂಚೆ ಕುದುರೆಗಳು ನಮ್ಮ ಸಾಮಾಜಿಕ ಜೀವನದಲ್ಲಿ ಗಣ್ಯಸ್ಥಾನ ಪಡೆದಿದ್ದವು. ಆದರೆ ಈಗಲೂ ಅನಿವಾರ್ಯವಾಗಿ ನಾವು ಕುದುರೆಗಳ ಸಹವಾಸ ಮಾಡಲೇ ಬೇಕಾಗುತ್ತದೆ.

ಬಿ. ಟಿ. ಸಿ. ಬಸ್ ಕೈಕೊಟ್ಟಾಗ ಜಟಕಾಸುರನನ್ನು ಆಶ್ರಯಿಸಬೇಕಾಗುತ್ತದೆ. ನಮ್ಮ ಅಸಹಾಯಕ ಪರಿಸ್ಥಿತಿಯನ್ನು ನೋಡಿ, "ಕೋನ್ನಿ ಬಸವನಗುಡಿ" ಅಂತ ಅರಚುತ್ತಾನೆ. ಸರಿ ನಾವು ಜಟಕಾದಲ್ಲಿ ಕೂರುವುದೇತಡ, "ಇನ್ನು ಮೂರು ಜನ ಬರ್ಲಿ ಸ್ವಾಮಿ ಈಗ ಗಾಡಿ ಬಿಡ್ತೀನಿ" ಎಂದು ಅಭಯ ನೀಡುತ್ತಾನೆ. ಗಾಡಿಯವನು ಹೋಗಿಬರುವ ಜನರನ್ನು ಕ್ಯಾನ್‌ವಾಸ್ ಮಾಡುವಂತೆ ನಾವು ಜನರನ್ನು ಬಸವನಗುಡಿಗೆ ಬರಲು ಅಂಗಲಾಚಬೇಕಾಗುತ್ತದೆ. ಕೆಲವೊಂದು ಸಾರಿ ಅದೇತಾನೇ ಬಸವನಗುಡಿಯಿಂದ ಬಂದಿರುವವರನ್ನು ಕೇಳುತ್ತೇವೆ. ಅವರಿಗೆ ಸಿಟ್ಟುಬಂದು "ಈಗ ಅಲ್ಲಿಂದಾನೆ ಬಂದಿದ್ದೀವಿ ಮತ್ತೆ ಇವನಿಗೋಸ್ಕರ ಬಸವನಗುಡಿಗೆ ಹೋಗ್ಬೇಕಂತೆ" ಎಂತ ಸಿಡುಗುಟ್ಟುತ್ತಾರೆ.

ಜಟಕಾ ಗಾಡಿಯನ್ನು ರಸ್ತೆಯಲ್ಲಿ ಒಂದುಕಡೆ ನಿಲ್ಲಿಸಬಾರದಂತೆ. ನಮ್ಮ ಗಾಡಿಯವನು ಮಾರ್ಕೆಟ್ ಎದಿರುಭಾಗದಲ್ಲಿರುವ ಚೌಕವನ್ನು ಮೂರುಬಾರಿ ಸುತ್ತುತ್ತಾನೆ. ಆ ಅವಧಿಯೊಳಗೆ ಜನರು ಬರಲೆಂದು. "ಏನಯ್ಯಾ ಗಾಡೀನ ಹೀಗೆ ಫೇರಿ ಹೊಡಸ್ತೀಯಾ? ಅಂತ ಕೇಳಿದರೆ "ನೀವು ಕೊಡೋ ಎಲ್ಡಾಣೀಗೆ ಫುಲ್‌ಗಾಡಿ

ಬಿಡ್ಲೀ ?" ಅಂತ ಮರು ಪ್ರಶ್ನೆ ಬಿಗಿಯುತ್ತಾನೆ. ಸರಿ ಮುಕ್ಕಾಲು ಗಂಟೆಯಮೇಲೆ ಯಾರುಯಾರೋ ಪುಣ್ಯಾತ್ಮರು ಬರುತ್ತಾರೆ. ತೆಳ್ಳಗಿರುವ ನಮ್ಮಂಥವರಿಗೆ ಈ ಗಾಡಿಯಲ್ಲಿ ಪ್ರಾಣಸಂಕಟ. ನಾವು ಎಲ್ಲಿ ಕೂತರೂ "ಮುಂದೆ ಬನ್ನಿ ಸಾಮಿ" ಎಂತ ಜಟಕಾಸುರ ಆರ್ಭಟಿಸುತ್ತಿರುತ್ತಾನೆ ನಾವು ಸಾಕ್ಷಾತ್ತಾಗಿ ಕುದುರೆಯ ಮೇಲೆ ಕೂತರೂ ಭಾರ ಏರುವುದಿಲ್ಲ. ಸರ್ಕಾರದವರು ಕೊಡುತ್ತಿರುವ ಎಂಟು ಔನ್ಸ್ ರೇಷನ್‌ನಿಂದ ದಪ್ಪವಾಗುವುದಾದರೂ ಹೇಗೆ ? ಇನ್ನೊಂದು ವಿಷಯ ಹೇಳಲು ಮರೆತಿದ್ದೆ. ಬೆಂಗಳೂರಿನ ಜಟಕಾ ಗಳಿಗೂ ಮೈಸೂರಿನ ಷಾಪಸಂದ್‌ಗಳಿಗೂ ಒಂದು ವ್ಯತ್ಯಾಸವಿದೆ ಜಟಕಾಗಳಲ್ಲಿ ಗಂಡ ಹೆಂಡತಿಯರು ಉರುಟಣೆಗೆ ಕೂತಹಾಗೆ ಇದಿರ್ಬದರಾಗಿ ಕುಳಿತುಕೊಳ್ಳಬೇಕು. ಷಾಪಸಂದ್‌ಗಳಲ್ಲಿ ಮೆರವಣಿಗೆಗೆ ಕೂತಹಾಗೆ ಪಕ್ಕಪಕ್ಕದಲ್ಲಿ ಕುಳಿತುಕೊಳ್ಳಬೇಕು. ಜಟಕಾದಲ್ಲಿ ಕೂತರೆ ಭಾರೀ ಪೈಲವಾನನ ಸಂಗಡ ಕುಸ್ತಿ ಮಾಡಿದ ಹಾಗಿರುತ್ತೆ. ಷಾಪಸಂದ್‌ನಲ್ಲಿ ಕೂತಾಗ ಮಳೆ ಬರುತ್ತಿದ್ದರೆ ನದಿಯಲ್ಲಿ ಮುಳುಗಿದ ಹಾಗಿರುತ್ತೆ.

ನಾವು ಹತ್ತಿದ ಜಟಕಾ ಗಾಡಿಯ ಬಡಕಲು ಕುದುರೆಯನ್ನು ನೋಡಿ, ಇದು ಗಮ್ಯಸ್ಥಾನ ತಲುಪುವುದೋ ಇಲ್ಲವೋ ಎಂಬ ಅನುಮಾನ ನಮಗೆ ಉಂಟಾಗುತ್ತದೆ. ನಮ್ಮ ಕೆಟ್ಟ ಮುಖ ನೋಡಿ ಅದರ ಅಂತರಾರ್ಥ ಗ್ರಹಿಸಿದ ಸಾಬಿಯು ಮೊನ್ನೆ ನಡೆದ ಜಂಖಾನ ರೇಸಿನಲ್ಲಿ ಈ ಕುದುರೆ ಮೊದಲನೇ ನಂಬರಿನಲ್ಲಿ ಬಂದಿದ್ದು ಪ್ಯಾರೂನ ತಮ್ಮ ಬಾಷಾ–ಯಾವ ಬಾಷಾ ಅಂತೀರಾ ಲಂಗಡಾ ಬಾಷಾ–ಅವನ ಗಾಡಿ ಜೊತೆಗೆ ಓಡಿ, ಒಂದೂವರೆ ಮೈಲಿ ಹಿಂದೆ ಹಾಕಿದ್ದು, ಮುಂತಾದ ಅದರ ಸಾಹಸಗಳನ್ನು ವರ್ಣಿಸುತ್ತಾನೆ. ಈ ಕುದುರೆಯ ಅಂದಚೆಂದಗಳನ್ನೂ ಧೈರ್ಯ ಸಾಹಸಗಳನ್ನೂ ಮೆಚ್ಚಿದ ರೆಫ್ಯೂಜಿ ಶ್ರೀಮಂತರೊಬ್ಬರು–ರೆಫ್ಯೂಜಿಗಳೆಲ್ಲಾ ಹಾಗೇ ಇರುತ್ತಾರೆ ಅನ್ನಿ—ಅದನ್ನು ಐದುನೂರು ರೂಪಾಯಿಗಳಿಗೆ ಕೇಳಿದ್ದು, ಸಾಬಿ ಅದನ್ನು ನಿರಾಕರಿಸಿದ್ದು ಮುಂತಾದ ಅದರ ಖಾಸಗಿ ವಿಚಾರಗಳನ್ನೆಲ್ಲ ನಮಗೆ

ಹೇಳುತ್ತಾನೆ. ಇಷ್ಟುಹೊತ್ತಿಗೆ ನಮ್ಮ ಗಾಡಿಯು ಕೋಟೆ ಹೈಸ್ಕೂಲಿನ ಚೌಕದ ಹತ್ತಿರ ಬರುತ್ತದೆ. "ಅಲ್ಲಿರುವ ದೀಪದ ಕಂಬದ ಸುತ್ತ ಹತ್ತು–ಹನ್ನೆರಡು ಬಾರಿ ಪ್ರದಕ್ಷಿಣೆ ಹಾಕುತ್ತದೆಯೇ ವಿನಾ ಮುಂದೆ ಹೋಗುವುದೇ ಇಲ್ಲ. ಇದೇನಯ್ಯ ಈ ಕುದುರೆ ಮುಂದೆಹೋಗದೆ ಈ ಪಾಟಿ ಫೇರಿ ಹೊಡೆಯುತ್ತದಲ್ಲಾ" ಎಂತ ಕೇಳಿದರೆ "ಏನ್ಮಾಡೋದು ಸಾಮೀ ಇದ್ನ ಗ್ರೇಟ್ ಹರ್ವಾನ್ ಸರ್ಕಸ್ ಕಂಪೆನೀಲಿ ಕೊಂಡಿದ್ದ. ಇಂಥ ರೌಡ್ ಸಿಕ್ಕರೆ ಫೇರಿ ಹೊಡೆಯುತ್ತೆ" ಎಂತ ಹೇಳಿದ. "ಹಾಗಂದರೆ ನಾವು ಇಳಿಯೋಣವೇನಯ್ಯ" ಅಂತ ಕೇಳಿದರೆ "ತಾಳಿ ಸಾಮಿ ಈಗೊಂದು ಕಮಾಲ್ ಮಾಡ್ತೀನಿ" ಅಂತ ಹೇಳುತ್ತ ಸಾಬಿ ಕೆಳಕ್ಕೆ ಥಂಗನೆ ಹಾರಿದ. ತನ್ನ ಕೈಲಿದ್ದ ಚಾಟಿಯಿಂದ ಸರ್ಕಸ್ಸಿನ ರಿಂಗ್‌ಮಾಸ್ಟರ್ ಹೊಡೆಯುವಂತೆ ಅಂತರಿಕ್ಷದಲ್ಲಿ ಛಟಾರನೆ ಹೊಡೆದ. ಕುದುರೆ ಲಕ್ಷಣವಾಗಿ ಎರಡು ಕಾಲುಗಳ ಮೇಲೆ ನಿಂತಿತು. ಗಾಡಿಯಲ್ಲಿದ್ದ ಇಬ್ಬರು ಕೆಳಕ್ಕೆ ಉರುಳಿದರು. ನಾನು ಮತ್ತು ಇನ್ನೊಬ್ಬ ಸಿಂಬೆ ಗುಮಾಸ್ತರು ಹಾಗೂ ಹೀಗೂ ಗಾಡಿಯಲ್ಲಿ ಕುಳಿತಿದ್ದೆವು. ಸರ್ಕಸ್ಸಿನಲ್ಲಿ ಪಳಗಿದ ಕುದುರೆಗೆ ಸರ್ಕಸ್ಸಿನ ನಮೂನೆಯಲ್ಲಿ ಆಜ್ಞೆಕೊಡಬೇಕೆಂದು ಸಾಬಿ ಹಾಗೆ ಮಾಡಿದನಂತೆ. ಇನ್ನೊಂದು ಸಾರಿ ಇನ್ನೊಂದು ನಮೂನೆಯಲ್ಲಿ ಚಾಟಿ ಬೀಸಿದ. ಕುದುರೆ ಹಿಂದ ಹಿಂದಕ್ಕೆ ಹೋಗಲಾರಂಭಿಸಿತು. ಮತ್ತೊಂದು ಬಾರಿ ಮತ್ತೊಂದು ರೀತಿಯಲ್ಲಿ ಚಾಟಿಯಿಂದ ಹೊಡೆದ. ಕುದುರೆ ನಾಗಾಲೋಟದಿಂದ ಓಡಲಾರಂಭಿಸಿತು. ಗಾಡಿಯವನು ತನಗಾದ ಆಶ್ಚರ್ಯವನ್ನು ಸುಧಾರಿಸಿಕೊಳ್ಳುವಷ್ಟರಲ್ಲಿ ಗಾಡಿ ಬಹುದೂರ ಹೋಗಿಬಿಟ್ಟಿದ್ದಿತು. ಸಾಬಿ ಚೌಕದಲ್ಲೇ ಉಳಿದ.

ನನ್ನ ಪಕ್ಕದಲ್ಲಿ ಕೂತಿದ್ದ ಸಿಂಬೆ ಗುಮಾಸ್ತರು ತಮ್ಮ ಕುಲದೈವವನ್ನು ಪ್ರಾರ್ಥಿಸುತ್ತಿದ್ದರು. ನನ್ನ ಹೆಂಡತಿಗೆ ತಿಳಿಸದೆ ಗಾಡಿ ಹತ್ತಿದ್ದು ತಪ್ಪೆಂದು ನನಗನಿಸಿತು. ಅಷ್ಟರಲ್ಲಿ ಗಾಡಿ ಗಾಂಧಿಬಜಾರಿನಲ್ಲಿ ನಿಂತಿದ್ದಿತು. ನಾನು ಮತ್ತು ಸಿಂಬೆ ಗುಮಾಸ್ತರು ಬೆವರು ಒರೆಸಿಕೊಳ್ಳುತ್ತಿರುವಾಗ ಸಾಬಿ ಬೇರೆ ಗಾಡಿಯಲ್ಲಿ ಬಂದ. ಅವನ ವಶಕ್ಕೆ ಕುದುರೆ–ಗಾಡಿ ಒಪ್ಪಿಸಿ ಮನೆ ತಲಪಿದ್ದಾಯಿತು.

# ಪತ್ರಿಕೋದ್ಯಮ

ಪತ್ರಿಕೋದ್ಯಮದಲ್ಲಿ ಅಥವಾ ಪತ್ರಿಕಾಲಯದ ಗಂಭೀರ ವಾತಾವರಣದಲ್ಲಿ ಹಾಸ್ಯವನ್ನು ಕಾಣುವುದು ಕಷ್ಟ. ಆದರೂ ಕಾರ್ಮೋಡಗಳ ಅಂಚಿನಲ್ಲಿ ರಜತರೇಖೆ ಇರುವಂತೆ ಇಲ್ಲಿಯೂ ಆಗಾಗ ಹಾಸ್ಯವನ್ನು ಕಾಣಬಹುದು. ಪತ್ರಿಕೋದ್ಯೋಗಿ ಸಾಮಾನ್ಯತಃ ಹಾಸ್ಯಪ್ರೇಮಿ. ರಾಜಕೀಯ ಮತ್ತು ಸಾಮಾಜಿಕ ರಂಗಗಳಲ್ಲಿ ಆಗುವ ಕ್ರಾಂತಿಗಳನ್ನು ಅವುಗಳಲ್ಲಿ ಪಾಲ್ಗೊಂಡು ನಕ್ಕಿರುತ್ತಾನೆ. ಎಂತಹ ಗಂಭೀರ ಸನ್ನಿವೇಶವೂ ಅವನ ಶಾಂತ ಮನಸ್ಸನ್ನು ಕಲಕಲಾರದು. ( ಜೀವನದ ಒರೆಗಲ್ಲಿನ ಮೇಲೆ ಅವನ ಅನುಭವಗಳನ್ನು ಉಜ್ಜಿ ನೋಡಿ ಬಣ್ಣ ಒರೆಗಳನ್ನು ಕಟ್ಟಿರುತ್ತಾನೆ.) ತಾನು ನುಡಿದ ಭವಿಷ್ಯಗಳು ನಿಜವಾದುದನ್ನು ನೋಡಿ ಸಹ ನಕ್ಕಿರುತ್ತಾನೆ.

ಸುಪ್ರಸಿದ್ಧ ಹಾಸ್ಯ ಸಾಹಿತಿ ಮಾರ್ಕ್‌ಟ್ವೇನ್ ಒಂದು ಪತ್ರಿಕಾಲಯದಲ್ಲಿ ಉಪಸಂಪಾದಕನಾಗಿ ಸೇರಿಕೊಂಡ. ಆರುತಿಂಗಳು ಕಾಲ ಹಾಗೂ ಹೀಗೂ ಕೆಲಸ ಮಾಡಿದ. ಒಂದು ದಿನ ಸಂಪಾದಕ ಅವನನ್ನು ಕರೆದು "ನಿನ್ನ ಕೆಲಸ ನಮಗೇನೂ ತೃಪ್ತಿಯನ್ನು ಕೊಟ್ಟಿಲ್ಲ. ಇಂದಿನಿಂದ ನಿನ್ನನ್ನು ಕೆಲಸದಿಂದ ತೆಗೆದುಹಾಕಿದ್ದೇವೆ" ಅಂತ ತಿಳಿಸಿದ. ಟ್ವೇನನ ಕೋಪ ತಾರಕಾಹಂತಕ್ಕೇರಿತು. ಸಂಪಾದಕನನ್ನು ಮನಸ್ವಿಯಾಗಿ, ಆಯಾಸವಾಗುವವರೆಗೂ ಬಯ್ದ. ಸಂಪಾದಕನಿಗೆ ಆಶ್ಚರ್ಯವಾಯಿತು. "ನನಗೆ ಬೇಡವಾದ ಕೆಲಸಗಾರನನ್ನು ತೆಗೆದುಹಾಕುವ ಅಧಿಕಾರ ನನಗಿಲ್ಲವೇ ? " ಅಂತ ಸಂಪಾದಕ ಟ್ವೇನನನ್ನು ಪ್ರಶ್ನಿಸಿದ. "ಇಲ್ಲ ಎಂದು ನಾನೆಲ್ಲಿ ಹೇಳು

ತ್ತೇನೆ, ಆದರೆ ಒಂದು ವಿಷಯ. ನಾನು ನಿಮ್ಮ ಕಚೇರಿಗೆ ಬಂದ ದಿನವೇ ಪತ್ರಿಕೋದ್ಯಮ ನನಗೆ ಹಿಡಿಸುವುದಿಲ್ಲವೆಂದೂ, ಆದರಲ್ಲಿ ಯಶಸ್ವಿಯಾಗಲಾರನೆಂದೂ ನನಗೆ ತಿಳಿಯಿತು. ನೀವು ಈ ಮಾತನ್ನು ಹೇಳಲು ಆರುತಿಂಗಳು ತೆಗೆದುಕೊಂಡಿರಿ. ನಾನು ಮೂರ್ಖನೋ, ನೀವುಮೂರ್ಖರೋ ನೀವೇ ಹೇಳಿ" ಎಂದು ಟ್ವೇನ್ ಕೇಳಿದ.

ಹೊರನೋಟಕ್ಕೆ ಪತ್ರಿಕಾವೃತ್ತಿ ನೋಡಲು ಚೆನ್ನಾಗಿದ್ದರೂ ಅದನ್ನು ಜೀರ್ಣಿಸಿಕೊಳ್ಳುವುದು ಕಷ್ಟ ಎಂಬುದು ಮೇಲ್ಕಂಡ ಪ್ರಸಂಗದಿಂದ ತಿಳಿದುಬರುತ್ತದೆ. ಟ್ವೇನನಂಥ ಉದ್ದಾಮ ಸಾಹಿತಿ ಸಮ್ಮತ ಹೊಡೆದ ಕಸುಬಿದು.

ಪತ್ರಿಕಾಲಯದಲ್ಲಿ ಸಂಪಾದಕರು ಮತ್ತು ಉಪಸಂಪಾದಕರು ಕೆಲಸ ಮಾಡುವಂತೆ ಸುದ್ದಿಗಾರನು ಊರೂರು, ಕೇರಿಕೇರಿ ಸುತ್ತ ಬೇಕಾಗುತ್ತದೆ. ರಾಜಕೀಯ ಹಾಗೂ ಸಾಮಾಜಿಕ ಸಂಭ್ರಮಗಳಿಗೆ ಹೋಗಬೇಕಾಗುತ್ತದೆ. ಆತ್ಮಹತ್ಯೆ, ಆಕಸ್ಮಿಕಗಳು ನಡೆದಲ್ಲಿ ಓಡ ಬೇಕಾಗುತ್ತದೆ. ಪತ್ರಿಕೆ ಹೆಚ್ಚು ಮಾರಾಟವಾಗಲು ಅನೇಕ ಜನರ ಬಗ್ಗೆ ಬರೆಯಬೇಕಾಗುತ್ತದೆ. ಇಂಥ ಸಂದರ್ಭಗಳಲ್ಲಿ ಸುದ್ದಿಗಾರ ಅನಿವಾರ್ಯವಾಗಿ ಶತ್ರುಗಳನ್ನು ಮಾಡಿಕೊಂಡಿರುತ್ತಾನೆ. ಆದರೂ ಆ ಜನಗಳೇ ಸುದ್ದಿಗಳಿಗೆ ಮೂಲಕಾರಣರಾದ್ದರಿಂದ ಅವರನ್ನು ಯಾವ ನಾಚಿಕೆ, ದಾಕ್ಷಿಣ್ಯವಿಲ್ಲದೆ ಮತ್ತೆ ಮತ್ತೆ ನೋಡಬೇಕಾಗು ತ್ತದೆ. ಒಂದು ಸಾರಿ ಸಂಪಾದಕರೊಬ್ಬರು ಒಬ್ಬ ಮಹನೀಯನನ್ನು ಭೇಟಿ ಮಾಡಲು ತಮ್ಮ ಸುದ್ದಿಗಾರನನ್ನು ಕಳಿಸಿದರು. ಸುದ್ದಿಗಾರ ಹೋಗಲಾರದೆ ಕಾಲೆಳೆದುಕೊಂಡು ಹೋದ. ಹೋದ ಅರ್ಧ ಗಂಟೆಯಲ್ಲಿಯೇ ವಾಪಸ್ಸು ಬಂದ. ಸಂಪಾದಕರು ಕೇಳಿದರು, "ಮಹಾಶಯ ಭೇಟಿಯಲ್ಲಿ ಏನು ಹೇಳಿದ" ಎಂದು ಸುದ್ದಿಗಾರ ಕೆನ್ನೆ ತೋರಿಸಿದ. "ಕೆನ್ನೆ ಸುದ್ದಿ ಏನಯ್ಯಾ? ಅವರೇನು ಹೇಳಿದರು" ಎಂದು ಸಂಪಾದಕ ಗುಡುಗಿದ. ಸುದ್ದಿಗಾರ ತಲೆಯ ಮೇಲಾಗಿದ್ದ ಬೋರೆ ತೋರಿಸಿದ. "ಬೋರೆಯನ್ನು ಅಚ್ಚು ಹಾಕಿಸಲು

ಸಾಧ್ಯವೇ ? ಅವನೇನು ಹೇಳಿದ ? ” ಎಂದರಚಿದ. “ಸ್ವಾಮೀ ಅವರು ಹೇಳಿದ ಮಾತುಗಳನ್ನು ಸಹ ಅಚ್ಚುಹಾಕುವುದು ಸಾಧ್ಯ ವಿಲ್ಲ” ಎಂತ ಸುದ್ದಿಗಾರ ನಿಧಾನವಾಗಿ ಉತ್ತರಕೊಟ್ಟ.

ಅಮೆರಿಕದಲ್ಲಿ ರಾಜಕೀಯ ಸುದ್ದಿಗಳಿಗಿಂತ ಆತ್ಮಹತ್ಯೆ, ಕೊಲೆ, ದಾಂಪತ್ಯ ವಿಚ್ಛೇದನ, ಮದುವೆ ಮುಂತಾದ ದುರಂತಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಡುತ್ತಾರೆ. ಮುಖ ಪುಟದಲ್ಲಿ ಕುಂಬಳಕಾಯಿ ಅಕ್ಷರಗಳಲ್ಲಿ ಈ ಸುದ್ದಿಗಳು ರಂಜಿಸುತ್ತವೆ. ಒಂದು ದಿನ ಒಂದು ಪತ್ರಿಕೆಯಲ್ಲಿ ಮುಖಪುಟದಲ್ಲಿ ಪ್ರಕಟಿಸುವಂಥ ಅನಾಹು ತದ ಸುದ್ದಿ ಇರಲಿಲ್ಲ. ಕೂಡಲೇ ಸುದ್ದಿಗಾರನಿಗೆ ಸಂಪಾದಕನ ಕರೆ ಬಂತು. “ಏನಯ್ಯಾ ಇವೊತ್ತು ಎಲ್ಲಿಯೂ ಕೊಲೆಯ ಸುದ್ದಿಗಳು ಬಂದಿಲ್ಲವೇ ? ” ಎಂದು ಸಂಪಾದಕ ಕೇಳಿದ. ಕೌಲೆ ಬಸವನಂತೆ ಸುದ್ದಿಗಾರ ತಲೆ ಅಲ್ಲಾಡಿಸಿದ. “ಹಾಗಾದರೆ ನೀನೇ ಒಂದೆರಡು ಕೊಲೆಗಳನ್ನು ಮಾಡಿ ಸುದ್ದಿ ಕಳಿಸು, ಇಲ್ಲದಿದ್ದರೆ ಇವೊತ್ತಿನ ಪತ್ರಿಕೆ ಹೊರಬರುವಂತಿಲ್ಲ” ಅಂತ ಸಂಪಾದಕ ಹೇಳಿದ.

ಉತ್ತರ ಕರ್ನಾಟಕದ ಪತ್ರಿಕೆಗಳಲ್ಲಿ ದಾಂಪತ್ಯ ವಿಚ್ಛೇದನದ ನೋಟೀಸ್‌ಗಳನ್ನು ಪ್ರಕಟಿಸುವ ಪದ್ಧತಿಯು ಇಂದಿಗೂ ಜಾರಿ ಯಲ್ಲಿದೆ. ಇವಕ್ಕೆ ಸೋಡ ಚೀಟಿ ನೋಟೀಸ್ ಎಂದು ಹೇಳು ತ್ತಾರೆ. ಗಂಡ, ಹೆಂಡತಿಗೂ, ಹೆಂಡತಿ, ಗಂಡನಿಗೂ ಈ ನೋ ಟೀಸ್ ಕೊಡುತ್ತಾರೆ. ಐದು ವರ್ಷದ ಹಿಂದೆ ತವರುಮನೆಗೆ ಹೋಗಿ ಮರಳಿ ಬಾರದಿದ್ದ ಹೆಂಡತಿಗೆ, ಗಂಡ ಸೋಡಚೀಟಿ ನೋಟೀಸೊಂದನ್ನು ಕೊಡಬೇಕಾಗಿತ್ತು. ಇದಕ್ಕಾಗಿ ಪತ್ರಿಕಾಲಯ ಒಂದಕ್ಕೆ ಬಂದ. ಆ ಬಗ್ಗೆ ಹಣ ಎಷ್ಟಾಗುವುದು ಎಂದು ವ್ಯವಸ್ಥಾ ಪಕರನ್ನು ವಿಚಾರಿಸಿದ. ಒಂದು ಅಂಗುಲಕ್ಕೆ ಮೂರು ರೂಪಾಯಿ ಎಂದು ಅವರು ಹೇಳಿದರು. ಜಾಹೀರಾತು ಕೊಡಲು ಬಂದ ಗಂಡ. “ಅಷ್ಟು ಹಣ ಕೊಡಲು ಸಾಧ್ಯವಿಲ್ಲ ಸ್ವಾಮೀ, ನನ್ನ ಹೆಂಡತಿ ಐದು

ಅಡಿ ಎತ್ತರವಿದ್ದಾಳೆ" ಎಂದು ಹೇಳುತ್ತ ಅಲ್ಲಿ ನಿಲ್ಲದೆ ಹೊರಟೇ ಹೋದ.

ಕೆಲವು ಸುದ್ದಿಗಳನ್ನು ಪ್ರಕಟಿಸಿದಾಗ ವಿಚಿತ್ರ ಪ್ರತಿ ಕ್ರಿಯೆಗಳಾಗುವುದೂ ಉಂಟು. ಒಂದು ಸಾರಿ, ಶಾಲೆಗಳ ಇನ್ಸ್ಪೆಕ್ಟರೊಬ್ಬರ ನಿಧನದ ಸುದ್ದಿ ಬಂದಿತು. ಅದನ್ನು ಪ್ರಕಟಿಸಿಯೂ ಆಯಿತು. ಇನಸ್ಪೆಕ್ಟರರ ಸರಳ ಸ್ವಭಾವ, ಸಹೃದಯತೆ ಮುಂತಾದ ಗುಣಗಳು ಯಥಾವತ್ತಾಗಿ ವರ್ಣಿತವಾಗಿದ್ದವು. ಅವರು ಆ ರೇಂಜಿಗೆ ಬಂದಂದಿನಿಂದ ನಡೆಸಿದ ಅಘಟಿತ ಘಟನಾಕಾರ್ಯಗಳು, ಅವರ ಜನಾನುರಾಗತನ ಮುಂತಾದವು ಯೋಗ್ಯ ಗುಣವಾಚಕಗಳಿಂದ ಪುಷ್ಟೀಕರಿಸಲ್ಪಟ್ಟಿದ್ದವು. ಅವರ ದಹನಕ್ರಿಯೆ ಸಮಯದಲ್ಲಿ ಸೇರಿದ ಜನಸಂದಣಿ, ಅವರ ಬಗ್ಗೆ ಊರಿನ ಮುಖಂಡರು ಉದುರಿಸಿದ ಬಾಷ್ಪಾಂಜಲಿ, ಮುಂತಾದವು ಬದುಕಿರುವವರೂ ಸಾಯಬೇಕೆನಿಸುವಂತಿದ್ದವು. ಈ ಸುದ್ದಿ ಪ್ರಕಟವಾದ ಎರಡು ದಿನಗಳ ನಂತರ ಸತ್ತ ಇನಸ್ಪೆಕ್ಟರರು ನಮ್ಮ ಕಚೇರಿಗೆ, ನಮ್ಮ ಪತ್ರಿಕೆ ಹಿಡಿದುಕೊಂಡು ಬಂದರು. ಸತ್ತವರು ಅವರೇನೆ ಅಥವಾ ಬೇರೆಯವರೇ ಎಂಬ ಅನುಮಾನ ನಮಗುಂಟಾಯಿತು. ಅವರಿಗಾಗದ ಯಾರೋ ಈ ನಿಧನದ ಸುದ್ಧಿಯನ್ನು ಕಳಿಸಿದ್ದರಂತೆ. ಸರಿ ಮಾರನೆಯ ದಿನ ಸತ್ತ ಇನಸ್ಪೆಕ್ಟರನನ್ನು ಸಂಜೀವಿನಿ ಅರ್ಥಾತ್ ತಿದ್ದುಪಡಿ ಹಾಕಿ ಬದುಕಿಸಿದೆವು.

ಇನ್ನೊಂದು ಸಾರಿ ಇಂತಹದೊಂದು ಪ್ರಸಂಗ ನಡೆಯಿತು. ವಯಸ್ಕರೊಬ್ಬರು ಸಮಾಜ ಸುಧಾರಣೆ ಕೆಲಸದಲ್ಲಿ ನಿರತರಾಗಿದ್ದರು. ವಿಧವಾ ವಿವಾಹಗಳನ್ನು ಕುದುರಿಸುತ್ತಿದ್ದರು. ಒಂದು ಸಾರಿ ಅವರೇ ಒಬ್ಬ ವಿಧವೆಯನ್ನು ಮದುವೆಯಾದ ವರದಿ ಆ ಊರಿನಿಂದಲೇ ಬಂದಿತ್ತು. ಯಾರೋ ಕಿಡಿಗೇಡಿಗಳು ಸುದ್ದಿಗೆ ಉಪ್ಪುಕಾರ ಹಚ್ಚಿ ಕಳಿಸಿದ್ದರು. ಪತ್ರಿಕೆಯಲ್ಲಿ ಸುದ್ದಿಯೂ ಪ್ರಕಟವಾಯಿತು. ಸಮಾಜ ಸುಧಾರಕರಿಗಿಂತ ಆ ವಿಧವೆಗೆ ಹದಿನೈದು ವರ್ಷಗಳು ಹೆಚ್ಚಾಗಿದ್ದ

ವಂತೆ ನಿಜವಾದ ಸಂಗತಿ ತಿಳಿದ ಮೇಲೆ ನಾವೇನೋ ಹೊಟ್ಟೆ ಹುಣ್ಣಾಗುವಂತೆ ನಕ್ಕೆವು. ಆದರೆ ಸಂಬಂಧಪಟ್ಟ ವ್ಯಕ್ತಿಗಳ ಗತಿ ಏನಾಗಿತ್ತೆಂದು ಹೇಳುವರಾರು ?

ಸಂಪಾದಕ ವರ್ಗದವರು ಇಂಥ ಸುದ್ದಿಗಳ ಬಗ್ಗೆ ಬಹಳ ಎಚ್ಚರಿಕೆಯಿಂದಿದ್ದರೂ ಒಂದೊಂದು ಬಾರಿ ಅನರ್ಥಗಳೂ ಜರುಗುವುದೂ ಉಂಟು.

ಪತ್ರಿಕೆಯನ್ನು ಕಾಲಕ್ಕೆ ಸರಿಯಾಗಿ ಹೊರಗೆಡವಲೇಬೇಕು. ಪತ್ರಿಕಾಕರ್ತರು ಗಡಿಯಾರದ ಸಂಗಡ ಸದಾ ಓಡುತ್ತಿರಬೇಕಾಗುತ್ತದೆ ಕೆಲವೊಂದು ಸಾರಿ ಕೆಲಸಗಾರರ ಅಭಾವದಿಂದಾಗಿ ಪತ್ರಿಕೆ ಸಕಾಲಕ್ಕೆ ಬರುವುದು ತಡವಾಗುವ ಸಂದರ್ಭ ಒದಗುತ್ತದೆ. ಆಗ ಏನಾದರೂ ಮಾಡಿ ಪತ್ರಿಕೆಯನ್ನು ವೇಳೆಗೆ ಸರಿಯಾಗಿ ತರಲೇಬೇಕು. ಆಗ ಪತ್ರಿಕಾಕರ್ತ ವಿಶೇಷ ಬುದ್ಧಿವಂತಿಕೆಯನ್ನು ವೆಚ್ಚಮಾಡಬೇಕಾಗುತ್ತದೆ. ಒಂದು ಸಾರಿ ಹೆಸರಾಂತ ಪತ್ರಿಕಾಕರ್ತರಾದ ಲಾರ್ಡ್ ನಾರ್ತ್‌ಕ್ಲಿಫ್‌ರವರಿಗೆ ಇಂಥ ಒಂದು ಪ್ರಸಂಗ ಒದಗಿತು. ಪತ್ರಿಕೆ ವೇಳೆಗೆ ಸರಿಯಾಗಿ ಬರುವುದಿಲ್ಲವೇ ಎಂಬ ಅನುಮಾನ ಅವರನ್ನು ಬಾಧಿಸಹತ್ತಿತು. ಎಷ್ಟು ಜಾಗ್ರತೆಯಾಗಿ ಮೇಕಪ್ ಮಾಡಿದರೂ ಇನ್ನು ಕೊಂಚ ಸ್ಥಳ ಉಳಿಯಿತು. ಅಲ್ಲಿ ತುಂಬಲು ತಯಾರಾದ ವಿಷಯವೂ ಇರಲಿಲ್ಲ. ಕೂಡಲೇ ಆ ಸ್ಥಳದಲ್ಲಿ ಒಂದು ಮರದ ತುಂಡನ್ನು ಹಾಕಿದರು. ಅದರ ಕೆಳಗೆ ಈ ರೀತಿ ಒಕ್ಕಣಿ ಹಾಕಲಾಯಿತು. "ಮೇಲ್ಕಂಡ ಚಿತ್ರವು ಒಬ್ಬ ಜಗದ್ವಿಖ್ಯಾತ ವ್ಯಕ್ತಿಯದಾಗಿದೆ. ಅವನ ಹೆಸರನ್ನು ಸರಿಯಾಗಿ ಹೇಳಿದವರಿಗೆ ಐದು ಪೌಂಡು ಬಹುಮಾನ." ಪತ್ರಿಕೆ ಅಚ್ಚಾದ ಮೇಲೆ ಮರದ ತುಂಡಿದ್ದ ಸ್ಥಳದಲ್ಲಿ ಮಸಿಯ ಮಧ್ಯದಲ್ಲಿ ಕೆಲವು ಗೆರೆಗಳು ಕಾಣುತ್ತಿದ್ದವು. ಏಸುಕ್ರಿಸ್ತ, ನೆಪೋಲಿಯನ್, ಲೆನಿನ್, ಬುದ್ಧ ಹೀಗೆ ಆ ಪತ್ರಿಕೆಯ ಓದುಗರು ತಮಗೆ ತೋರಿದಂತೆ ಹೆಸರು ಬರೆದು ಕಳಿಸಿದರು. ಕಡೆಗೆ ನಾರ್ತ್ ಕ್ಲಿಫ್‌ರವರು ನಿಜ ಸಂಗತಿಯನ್ನು ಓದುಗರಿಗೆ ತಿಳಿಸಿದರು.

ಪತ್ರಿಕೆಯೆಲ್ಲ ಮುಗಿಯಿತೆಂದು ತಿಳಿದರೂ ಕೆಲವು ಸಂದರ್ಭಗಳಲ್ಲಿ ಸ್ವಲ್ಪ ಅಂದರೆ ನಾಲ್ಕು-ಐದು ಸಾಲುಗಳ ಸುದ್ದಿಗಳು ಬೇಕಾಗುತ್ತವೆ. ಇಂಥ ಸಮಯದಲ್ಲಿ ನನ್ನ ಸಹೋದ್ಯೋಗಿ ಒಂದು ಕೆಲಸ ಮಾಡುತ್ತಿದ್ದ. ಆಗ ಚೀನಾ ಜಪಾನ್‌ಗಳಿಗೆ ಯುದ್ಧ ನಡೆದಿತ್ತು. ಪತ್ರಿಕೆಯಲ್ಲಿ ಎಲ್ಲಿಯಾದರೂ ಕೊಂಚ ಸ್ಥಳ ಉಳಿದರೆ ಯುದ್ಧದಲ್ಲಿ ಈದಿನ ಇಪ್ಪತ್ತೈದು ಸಾವಿರ ಚೀನಿಯರು ಹತರಾದರು, ಎಂದು ಸುದ್ದಿ ಕೊಡುತ್ತಿದ್ದ. ಮಾರನೇದಿನ ಅಷ್ಟೇ ಸ್ಥಳಕ್ಕೆ ಸುದ್ದಿಯೊಂದು ಬೇಕಾದಾಗ ನಿನ್ನಿನ ಯುದ್ಧದಲ್ಲಿ ಇಪ್ಪತ್ತೈದು ಸಾವಿರ ಚೀನೀಯರು ಸತ್ತದ್ದು ಸುಳ್ಳು ಎಂದು ಅಧಿಕೃತವಾಗಿ ತಿಳಿದು ಬಂದಿದೆ, ಎಂದು ತಿದ್ದುಪಡಿ ಕೊಡುತ್ತಿದ್ದ.

ಪತ್ರಿಕೆ ಹೆಚ್ಚಾಗಿ ಖರ್ಚಾಗಬೇಕಾದರೆ ಯಾರನ್ನಾದರೂ ಬಯ್ಯಬೇಕು. ಇಲ್ಲಸಲ್ಲದ ಆಪಾದನೆಗಳನ್ನು ಹೊರೆಸಬೇಕು. ಪತ್ರಿಕೆ ಪತ್ರಿಕೆಗಳಿಗೆ ಜಗಳ ಬಿದ್ದಿರುತ್ತದೆ. ಇಹಂತೂ ಎರಡು ನಾಯಿಗಳು ಕಚ್ಚಾಡಿದಂತಿರುತ್ತದೆ. ಒಂದು ಸಾರಿ ಪ್ಯಾರಿಸ್‌ನಿಂದ ಎರಡು ಪತ್ರಿಕೆಗಳು ಹೊರಡುತ್ತಿದ್ದವು. ಒಂದರ ಹೆಸರು ಸೋರ್ಡ್‌ಫ, ಇನ್ನೊಂದರ ಹೆಸರು ಸ್ಕಾರ್ಪಿಯನ್. ಈ ಎರಡು ಪತ್ರಿಕೆಗಳು ಇಡೀ ಪ್ಯಾರಿಸ್ ನಗರವನ್ನು ಇಬ್ಭಾಗಮಾಡಿದ್ದವು. ಈ ಪತ್ರಿಕೆಗಳಿಗೆ ಹೇಳತೀರದ ಜಗಳ ಬಿದ್ದಿತ್ತು. ಪ್ರತಿಸಂಚಿಕೆಯಲ್ಲೂ ತನ್ನ ವೈರಿ ಪತ್ರಿಕೆಯನ್ನು ಬಯ್ಯುವ ಸಾಹಿತ್ಯವಿನಾ ಇವುಗಳಲ್ಲಿ ಮತ್ತೇನೂ ಇರುತ್ತಿರಲಿಲ್ಲ.

ಈ ಪತ್ರಿಕೆಗಳ ಜಗಳವನ್ನು ಹೇಗಾದರೂ ಬಗೆಹರಿಸಲು ಊರಿನ ಗಣ್ಯ ಮನುಷ್ಯರೊಬ್ಬರು ಪತ್ರಿಕೆಗಳ ಸಂಪಾದಕರಿಗೆ ಉಪಹಾರಕ್ಕೆಂದು ತಮ್ಮ ಮನೆಗೆ ಆಹ್ವಾನ ಕಳಿಸಿದರು. ಇಂಥ ದೊಡ್ಡ ಮನುಷ್ಯರ ಆಹ್ವಾನ ಬಂದಿದ್ದನ್ನು ನೋಡಿ ಸೋರ್ಡ್‌ಫ ಪತ್ರಿಕೆಯ ಸಂಪಾದಕರು ಅಲ್ಲಿಗೆ ಧಾವಿಸಿದರು. ಗಣ್ಯ ಮನುಷ್ಯರು ಅವರ ಕುಶಲ ಸಮಾಚಾರ ವಿಚಾರಿಸಿ ಸ್ಕಾರ್ಪಿಯನ್ ಸಂಪಾದಕರೆಲ್ಲಿ ?

ಎಂದು ಕೇಳಿದರು. ಅದಕ್ಕೆ ಆ ಮನುಷ್ಯ ಉತ್ತರಕೊಡುತ್ತ ಆ ಪತ್ರಿಕೆಯ ಸಂಪಾದಕನು ನಾನೇ ಎಂದು ತಿಳಿಸಿದ.

ಒಬ್ಬ ಮನುಷ್ಯ ಎರಡು ಪತ್ರಿಕೆಗಳನ್ನು ಬೇರೆಯವರ ಹೆಸರಿನಲ್ಲಿ ಹೊರಡಿಸುತ್ತಿದ್ದ. ಎರಡು ಪತ್ರಿಕೆಗಳಲ್ಲಿನ ಬಯ್ಗುಳ ಸಾಹಿತ್ಯವನ್ನು ಒಬ್ಬನೇ ಬರೆಯುತ್ತಿದ್ದ.

ಎಲ್ಲ ಪತ್ರಿಕೆಗಳಿಗಿಂತ ಮುಂಚೆ ಸುದ್ದಿ ಒದಗಿಸುವುದರಲ್ಲೇ ಪತ್ರಿಕಾಕರ್ತನ ಜಾಣ್ಮೆ ಇರುವುದು ಆ ಸುದ್ದಿಯನ್ನು ಇತರಪತ್ರಿಕೆಗಳು ಇವನಿಗಿಂತ ಜಾಗ್ರತೆಯಾಗಿ ತಂದರೆ ಇವನ ತಂಗಳು ಪತ್ರಿಕೆಯನ್ನು ಯಾರೂ ಓದುವವರು ಗತಿಯಿರುವುದಿಲ್ಲ. ಯಾರಾದರೂ ದೊಡ್ಡವರಿಗೆ ಕಾಹಿಲೆ ಆಯಿತೆಂದರೆ ಅವರ ಜೀವನ ಚರಿತ್ರೆ, ರಾಜಕೀಯ ಮತ್ತು ಸಾಮಾಜಿಕ ರಂಗಗಳಲ್ಲಿ ಅವರು ಮಾಡಿದ ಸಾಹಸಗಳು, ಅವರ ಜೀವಿತದಲ್ಲಿನ ಮುಖ್ಯ ಘಟನೆಗಳು ಮುಂತಾದವನ್ನು ಅರಿಸಿಕೊಂಡು ಪತ್ರಿಕಾಕರ್ತ ತಯಾರಾಗಿರುತ್ತಾನೆ. ಆಸಾಮಿ ಸತ್ತ ಸುದ್ದಿ ಬಂದಕೂಡಲೇ ತಾನು ಒದಗಿಸಿಕೊಂಡಿದ್ದ ಸುದ್ದಿಗಳನ್ನು ಸೇರಿಸಿ ಪತ್ರಿಕೆಗೆ ಕೊಟ್ಟುಬಿಡುತ್ತಾನೆ. ದಿವಂಗತ ಕೆಮಾಲ್ ಪಾಷಾರವರಿಗೆ ವಿಪರೀತ ಕಾಹಿಲೆಆದ ಪ್ರಕಟನೆಗಳು ಬರಲಾರಂಭವಾದವು ಅವರು ಬದುಕುವ ಸಂಭವ ಇಲ್ಲವೆಂದು ಗೊತ್ತಾಯಿತು. ಸರಿ ಅವರ ಬಗ್ಗೆ ದೊರೆತ ಸಾಹಿತ್ಯವನ್ನೆಲ್ಲ ಸಂಗ್ರಹಿಸಿ ಅವುಗಳನ್ನೆಲ್ಲಾ ಕಂಪೋಜ್ ಮಾಡಿದ್ದಾಯಿತು ಕೆಮಾಲ್ ಪಾಷಾರವರ ನಿಧನದ ಸುದ್ದಿ ಬಂದಕೂಡಲೇ, ತಂತಿ ಸುದ್ದಿಗಳನ್ನೆಲ್ಲ ಸೇರಿಸಿ ಕೇವಲ ಒಂದು ಗಂಟೆಯಲ್ಲಿ ವಿಶೇಷ ಸಂಚಿಕೆಯೊಂದನ್ನು ಹೊರಡಿಸಿ ಬಿಸಿ ದೋಸೆಗಳಂತೆ ಮಾರಾಟಮಾಡಿದ್ದಾಯಿತು.

ಇದರಂತೆ ಉತ್ತರ ಭಾರತದ ಪ್ರಖ್ಯಾತ ಅರಸರಿಗೆ ಕಾಹಿಲೆ ಆಯಿತು. ಅವರ ಅನಾರೋಗ್ಯದ ಪ್ರಕಟನೆಗಳು ಗಾಬರಿಗೊಳ್ಳುವಂತಿದ್ದವು ಅವರು ಬದುಕುವುದಿಲ್ಲವೆಂಬ ಮನವರಿಕೆಯೂ

ಆಯಿತು. ಅವರ ಪಡಿಯಚ್ಚು ಹುಡುಕಿದ್ದಾಯಿತು. ಅವರ ಬಗ್ಗೆ ಸಾಹಿತ್ಯವನ್ನೆಲ್ಲ ಅಣಿಮಾಡಿಕೊಂಡಿದ್ದಾಯಿತು. ಆದರೆ ಆ ಅರಸ ರಿಗೆ ಏನು ತೋಚಿತೋ ಏನೋ ಪರಲೋಕ ಯಾತ್ರೆಯನ್ನು ನಿಲ್ಲಿಸಿ ಬಿಟ್ಟರು!

ಗಂಭೀರ ವಾತಾವರಣದಿಂದ ತುಂಬಿರುವ ಪತ್ರಿಕಾಲಯದಲ್ಲಿ ಸಹ ಒಂದೊಂದು ಬಾರಿ ನಗೆ ಮಿಂಚು ಹೊಳೆಯುವುದೂ ಉಂಟು.



# ಯೋಜನೆಗಳು

ಈ ಯುಗವನ್ನು ಆಟಂ ಯುಗವೆಂತಲೂ, ವಿಜ್ಞಾನ ಯುಗವೆಂತಲೂ ಅನೇಕರು ಕರೆಯುತ್ತಾರೆ. ನಿಜಕ್ಕೂ ಈ ಯುಗವನ್ನು ಯೋಜನೆಗಳ ಯುಗವೆಂದು ಕರೆದರೆ ಚೆನ್ನಾಗಿರುತ್ತದೆ. ಮೊದಲು ಈ ಯೋಜನೆಯ ವ್ಯಾಧಿ ಹುಟ್ಟಿದ್ದು ರಷ್ಯಾದಲ್ಲಿ ಅದು ಸಾಂಕ್ರಾಮಿಕ ರೋಗದಂತೆ ಹಬ್ಬಿ ನಮ್ಮ ದೇಶಕ್ಕೂ ಬಂದಿತು. ನಾವು ಸಹ ಯೋಜನೆಗಳನ್ನು ವ್ಯಾಪಾರೀ ಪ್ರಮಾಣದಲ್ಲಿ ತಯಾರಿಸುತ್ತ ಬಂದಿದ್ದೇವೆ. ರಷ್ಯಾಕ್ಕೂ ನಮಗೂ ಒಂದು ಅಂತರವಿದೆ. ರಷ್ಯಾ ತಾನು ಹಾಕಿಕೊಂಡ ಯೋಜನೆಗಳನ್ನು ಕಾರ್ಯರೂಪಕ್ಕೆ ತರುತ್ತದೆ. ನಮ್ಮ ಯೋಜನೆಗಳು ಯೋಜನೆಗಳಾಗಿಯೇ ಉಳಿದಿವೆ.

ಬ್ರಿಟನ್ನಿನ ಮಾಜೀ ಪ್ರಧಾನರಾದ ವಿನ್‍ಸ್ಟನ್ ಚರ್ಚಿಲ್ಲರು ಕಾಮನ್ಸ್ ಸಭೆಯಲ್ಲಿ ಮಾತನಾಡುತ್ತ, ರಷ್ಯದ ಯೋಜನೆಗಳನ್ನು ಕುರಿತು ಈ ರೀತಿ ಹೇಳಿದರು. "ಲಂಡನ್ನಿನಿಂದ ಮಾಸ್ಕೋಕ್ಕೆ ರೈಲು ಹಾಕುವ ವಿಚಾರವಾಗಿ ನಾವು ಕಾಮನ್ಸ್ ಸಭೆಯಲ್ಲಿ ಚರ್ಚೆ ನಡೆಸುತ್ತಿರುತ್ತೇವೆ. ಇಂಥ ಚರ್ಚೆ ಆರಂಭವಾದ ವಿಷಯ ರಷ್ಯಕ್ಕೆ ತಿಳಿಯುತ್ತದೆ. ನಮ್ಮ ಚರ್ಚೆ ವರ್ಷಗಟ್ಟಲೆ ನಡದೇ ಇರುತ್ತದೆ. ಈ ಮಧ್ಯೆ ಮಾಸ್ಕೋದಿಂದ ಲಂಡನ್ನಿನವರೆಗೆ ರೈಲುಕಂಬಿಗಳು ಹಾಕಲ್ಪಟ್ಟು ರೈಲು "ಕು ಕೂ" ಎಂದು ಶಬ್ದಮಾಡುವುದನ್ನು ಕೇಳಬಹುದು" ಎಂದು ಹೇಳಿದರು.

ಇಂಥದೇ ಇನ್ನೊಂದು ಉದಾಹರಣೆಯನ್ನು ನೋಡಿ, ಎರಡನೆಯ ಮಹಾಯುದ್ಧ ಸಮಯದಲ್ಲಿ ಅಮೆರಿಕ ಮತ್ತು ಆಸ್ಟ್ರೇಲಿಯಾ

ಗಳೆರಡೂ ತಲಾ ಆರರಂತೆ ಹಡಗುಗಳನ್ನು ನಿರ್ದಿಷ್ಟ ಅವಧಿಯೊಳಗಾಗಿ ತಯಾರಿಸಲು ಒಪ್ಪಿಕೊಂಡವು. ಕೆಲ ತಿಂಗಳಾದ ಮೇಲೆ ಒಬ್ಬ ಆಸ್ಟ್ರೇಲಿಯನ್ ಹಡಗು ಕಟ್ಟುವ ಇಂಜಿನಿಯರ್, ಅಮೆರಿಕನ್ ಹಡಗು ಕಟ್ಟುವ ಇಂಜನಿಯರ್ ಒಬ್ಬನನ್ನು ಸಂಧಿಸಿದ. ಆಸ್ಟ್ರೇಲಿಯನ್ ಇಂಜನಿಯರ್ ಕೇಳಿದ "ಹಡಗುಗಳ ತಯಾರಿಕೆ ಕೆಲಸ ಹೇಗೆ ಸಾಗಿದೆ ?" "ಇನ್ನು ಆರು ನಟ್ ಬೋಲ್ಟ್‌ಗಳನ್ನು ಹಾಕಿದರೆ ಆಯಿತು. ಹಡಗುಗಳೆಲ್ಲ ತಯಾರಾದಂತೆಯೇ. ಸರಿ, ನಿಮ್ಮ ಹಡಗುಗಳ ತಯಾರಿಕೆ ಕೆಲಸ ಹೇಗೆ ಸಾಗಿದೆ ?" ಎಂದು ಕೇಳಿದ. "ನಮ್ಮದೇನೂ ಹೆಚ್ಚಿಲ್ಲ ಇನ್ನಾರು ಚೀಟಿಗಳ ಸಹಿ ಆಯಿತೆಂದರೆ ಹಡಗು ಕಟ್ಟುವ ಕೆಲಸ ಆರಂಭಿಸುತ್ತೇವೆ" ಅಂತ ಆಸ್ಟ್ರೇಲಿಯನ್ ಇಂಜನಿಯರ್ ಗಂಭೀರವಾಗಿ ಹೇಳಿದ.

ನಮ್ಮ ದೇಶದಲ್ಲಿ ನಾಯಕರು ಹೆಚ್ಚು, ಅನುಯಾಯಿಗಳು ಕಮ್ಮಿ. ಇದರಂತೆ ಯೋಜನೆಗಳು ಹೆಚ್ಚು, ಅವನ್ನು ಕಾರ್ಯರೂಪಕ್ಕೆ ತರುವುದು ಕಮ್ಮಿ. ಈಗ್ಗೆ ಮೂರುವರ್ಷಗಳ ಹಿಂದೆ "ಹೆಚ್ಚು ಆಹಾರ ಬೆಳೆಯಿರಿ" ಎಂಬ ಪ್ರಚಾರ ಯೋಜನೆಯೊಂದನ್ನು ಕೇಂದ್ರ ಸರ್ಕಾರ ಕೈಗೊಂಡಿತು. ಈ ಬಗ್ಗೆ ಸಾಹಿತ್ಯ ವಿಪರೀತ ಬೆಳೆಯಿತು. ಹಾಳಾದ್ದು ಬರಿ ಹೊಟ್ಟೆ ಈ ಸಾಹಿತ್ಯಾಮೃತದಿಂದ ತುಂಬುವುದಿಲ್ಲ. ಯುದ್ಧಕಾಲದಲ್ಲಿ "ಕಡಿಮೆ ಪ್ರಯಾಣ ಮಾಡಿರಿ" "ಕಡಿಮೆ ಕಾಗದ ಬಳಸಿ" ಮುಂತಾದ ಹುಚ್ಚು ಹುಚ್ಚು ಪ್ರಚಾರ ಯೋಜನೆಗಳು ಆರಂಭವಾದವು. ಅವಸಾನ ಹೊಂದಿದವು.

೧೯೫೧ ರ ಹೊತ್ತಿಗೆ ಭಾರತವು ಆಹಾರ ವಿಚಾರದಲ್ಲಿ ಸ್ವಯಂಪೂರ್ಣತೆ ಪಡೆಯಲೇಬೇಕೆಂದು ಕೇಂದ್ರಸರ್ಕಾರ "ಸತ್ತಗೆರೆ" (ಡೆಡ್‌ಲೈನ್) ಹಾಕಿದೆ. ಈ ಮಧ್ಯೆ ನಾವು ಆದಷ್ಟುಮಟ್ಟಿಗೆ ಅಕ್ಕಿ, ಗೋಧಿಯ ಸೇವನೆಯನ್ನು ಕಡಿಮೆಮಾಡಬೇಕೆಂದೂ, ಅದಕ್ಕೆ ಬದಲಾಗಿ ಗೆಣಸು, ಬಾಳೇಹಣ್ಣು ಮುಂತಾದುವನ್ನು ಸೇವಿಸಬೇಕೆಂದೂ ಪ್ರಧಾನಿ ಪಂಡಿತ ಜವಹರಲಾಲ್ ನೆಹರೂರವರು ಬ್ರಾಡ್‌ಕಾಸ್ಟ್

ಭಾಷಣದಲ್ಲಿ ತಿಳಿಸಿದರು. ಈಗ ಭಾರತವು ರೂಪಾಯಿ ಮೌಲ್ಯ ಇಳಿತಾಯ ಮಾಡಿಕೊಂಡಿರುವುದರಿಂದ ಸೆವೆನೋ'ಕ್ಲಾಕ್, ಜಿಲೆಟ್ ಮುಂತಾದ ಬ್ಲೇಡುಗಳು ಕೈಗೆ ಸಿಗದಂತಾಗಿದೆ. ಈ ರಹಸ್ಯ ಅರಿತ ಕ್ಷೌರಿಕರು ಮುಖಕ್ಷೌರಕ್ಕೆ ನಾಲ್ಕಾಣೆ ಕೇಳುತ್ತಾರೆ. ಮನೆಗಳ ಅಭಾವ ಹೇಳತೀರದಾಗಿದೆ. ಇವನ್ನೆಲ್ಲ ಒಟ್ಟುಗೂಡಿಸಿದರೆ, ಕಂದ ಮೂಲಗಳನ್ನು ತಿಂದು, ಗಡ್ಡ ಬಿಟ್ಟುಕೊಂಡು, ಅರಣ್ಯದಲ್ಲಿ ವಾಸಿಸುವ ಅವಕಾಶ–ಋಷಿಪುಂಗವರಾಗುವ ಸದವಕಾಶ ನಮಗೆ ದೊರಕಿದೆ. ಇದರಿಂದ ಅಳಿಯುತ್ತಿರುವ ಭಾರತೀಯ ಸಂಸ್ಕೃತಿಯನ್ನು ನಾವು ಪುನರುದ್ಧಾರ ಮಾಡಿದಂತಾಗುವುದಲ್ಲದೆ, ನಮ್ಮ ಸರ್ಕಾರ ಹಾಕಿಕೊಳ್ಳುತ್ತಿರುವ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ನೆರವು ನೀಡಿದಂತಾಗುತ್ತದೆ.

ಮೈಸೂರು ಸರ್ಕಾರದವರು ಇತರ ಪ್ರಾಂತಸರ್ಕಾರಗಳು ಪಾನನಿರೋಧವನ್ನು ಜಾರಿಗೆ ತಂದಿರುವಂತೆ ತಾವು ತರುವುದಾಗಿ ಅನೇಕ ವರ್ಷಗಳಿಂದ ಹೇಳುತ್ತ ಬಂದಿದ್ದಾರೆ. ಈ ಕೆಲಸವನ್ನು ಮಾಡಿಯೇ ತೀರುತ್ತೇವೆಂದು ಹೆದರಿಸುತ್ತಲಿದ್ದಾರೆ ಮತ್ತು ಈ ಬಗೆ ಒಂದು ಯೋಜನೆಯನ್ನು ಸಹ ಸಿದ್ಧಪಡಿಸಿಕೊಂಡಿದ್ದಾರೆ. ಏನೆಂದರೆ ಪ್ರತಿವರ್ಷ ಶೇಕಡ ಮುವ್ವತ್ತರಂತೆ ಪಾನನಿರೋಧಕ್ರಮವನ್ನು ಜಾರಿಗೆ ತರುತ್ತಾರಂತೆ. ಯಥಾನುಶಕ್ತಿ ಸಹಗಮನದ ಲೆಕ್ಕಾಚಾರದಂತೆ ಇದು ತೋರುತ್ತದೆ. ಅನೇಕ ಕಡೆ ಪಾನನಿರೋಧ ಕ್ರಮ ಜಾರಿಗೆ ಬಂದರೂ, ಸರ್ಕಾರದ ಅಬ್ಕಾರಿ ಉತ್ಪನ್ನ ಮೊದಲಗಿಂತಲೂ ಹೆಚ್ಚಾಗಿದೆ. ವಿರೋಧಾಭಾಸಕ್ಕೆ ಇದಕ್ಕಿಂತಲೂ ಉತ್ತಮ ಉದಾಹರಣೆ ದೊರೆಯದು. ಈಗ ಜನಗಳು ಸೇಂದಿ, ಷರಾಬುಗಳನ್ನು ಕಾಫಿ, ಟೀಗಳಂತೆ ಮನೆಯಲ್ಲಿಯೇ ತಯಾರಿಸುತ್ತಿದ್ದಾರೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಇದೊಂದು ಗೃಹ ಕೈಗಾರಿಕೆಯಾಗಿದೆ.

ಬಿಕ್ಷುಕರಿಗೆ ಪರಿಹಾರ ಒದಗಿಸಲು ಒಂದು ಸಮಿತಿ ಸೇರಿ ಯೋಜನೆಯೊಂದನ್ನು ಸಿದ್ಧಗೊಳಿಸಿತು. ಸಮಿತಿಯುವರಿಗೆ ಪರಿಹಾರ

ದೊರೆತು ಬಿಕ್ಕುಕರಿಗೆ ಬರೀ ಯೋಜನೆ ದೊರೆತದ್ದು ಆಧುನಿಕ ಪವಾಡ ಗಳಲ್ಲಿ ಒಂದಾಗಿದೆ ಎಂದು ತಿಳಿದ ಮಹನೀಯರು ಅಭಿಪ್ರಾಯ ಪಟ್ಟಿದ್ದಾರೆ

ಯಾವುದಾದರೂ ಒಂದು ಯೋಜನೆ ತಯಾರಾಗಬೇಕಾದರೆ ಅದು ಎಷ್ಟೋ ಕರ್ಮಕಾಂಡಗಳನ್ನು ಕಾಣಬೇಕು. ಮೊದಲು ಈ ವಿಚಾರದಲ್ಲಿ ಶಾಶನಸಭೆಯಲ್ಲಿ ಕೇಳಿದಾಗ ಸಂಬಂಧಪಟ್ಟ ಮಂತ್ರಿಗಳು "ಸರ್ಕಾರದ ಆಲೋಚನೆಯಲ್ಲಿದೆ" ಎಂದು ಹೇಳು ತ್ತಾರೆ ಆಮೇಲೆ ಆ ಯೋಜನೆಯ ಬಗ್ಗೆ ಕರಡು ಸಿದ್ಧಗೊಳಿಸಲು ಒಂದು ಉಪಸಮಿತಿಯನ್ನು ರಚಿಸಲಾಗುವುದು. ಆ ಉಪಸಮಿತಿ ಆರುತಿಂಗಳಿಗೋ, ವರ್ಷಕ್ಕೋ ಒಂದುಸಾರಿ ಸಭೆ ಸೇರಿ, ಎಕ್ಸ್ ಪರ್ಟ್ಸ್ ಒಪಿನಿಯನ್ (ತಜ್ಞರ ಅಭಿಪ್ರಾಯ)ಬೇಕೆಂದು ಆ ತಜ್ಞರ ಕಡೆ ಕಟ್ಟನ್ನು ಎಸೆದುಬಿಡುವುದು. ತಜ್ಞರು ಅದನ್ನೆಲ್ಲ ತಿರುವಿಹಾಕಿ ತಮ್ಮ ಮಾತೂ ನಡೆಯಲಿ ಅಂತ ಒಂದು ಕೊಕ್ಕೆ ಹಾಕುವರು. ಅಂತೂ ಕೆಲಸವಾಗುವುದು ತಡವಾಗುವುದಕ್ಕೆ ಈ ಯೋಜನೆಗಳಿಂದ ತುಂಬಾ ಸಹಾಯವಾಗುತ್ತದೆ.

ಈಗ್ಗೆ ಸುಮಾರು ಐದುವರ್ಷಗಳ ಹಿಂದೆ ಯೋಜನೆಗಳ ಸ್ಪರ್ಧೆಯೇ ನಮ್ಮ ದೇಶದಲ್ಲಿ ನಡೆಯಿತು. ಬಾಂಬೆಪ್ಲಾನ್ (ತಾತಾ ಯೋಜನೆ) ಅಗರವಾಲಾಯೋಜನೆ (ಗಾಂಧಿಪ್ಲಾನ್) ವೆಂಕಟ ರಮಣಿಯೋಜನೆ ಮುಂತಾದವು ಹೊರಬಿದ್ದವು. ಮುಂಬೈ ಯೋಜನೆ ಬಂಡವಾಳಗಾರರ ಹಿತಸಾಧನೆಗೆ ಹೊರಟಿದ್ದೆಂದೂ, ಅಗರವಾಲರ ಯೋಜನೆ ಕಾರ್ಯರೂಪಕ್ಕೆ ತರಲು ಸಾಧ್ಯವಿಲ್ಲೆಂದೂ ಮೂದಲಿಸುತ್ತ, ಎಂ. ಎನ್. ರಾಯ್‌ರವರು ತಮ್ಮದೊಂದು ಯೋಜನೆಯನ್ನು ದೇಶದ ಮುಂದಿಟ್ಟರು. ಈಗ ಈ ಎಲ್ಲ ಯೋಜ ನೆಗಳೂ ಇನ್ನೂ ಯೋಜನೆಗಳಾಗಿಯೇ ಉಳಿದಿವೆ.

ಮೊನ್ನಿನ ಮಹಾಯುದ್ಧದಲ್ಲಿ ವರ್ತಮಾನ ಪತ್ರಿಕೆಗಳನ್ನು ಓದುತ್ತಿದ್ದವರಿಗೆ ನೆನಪಿರಲೇಬೇಕು. ಮಾಜೀ ಪ್ರಧಾನಿ ಮಿ|| ವಿನ್ಸ್‌ಟನ್ ಚರ್ಚಿಲ್‌ರವರ ಬೆಂಕಿ ಭಾಷಣಗಳನ್ನು ಓದದವ

ರಾರು? ಮಿತ್ರರಿಗೆ ಸೋಲಾಗಿ, ಮಿತ್ರ ಸೇನೆಗಳು ಹಿಮ್ಮೆಟ್ಟಿದಾಗ "ಮೊದಲೇ ಯೋಜನೆ ಮಾಡಿಕೊಂಡಿದ್ದಂತೆ ಸಿದ್ಧಪಡಿಸಿದ ಸ್ಥಳಗಳಿಗೆ ನಮ್ಮ ಸೇನೆಗಳು ಶಿಸ್ತಿನಿಂದ ಹಿಂದೆ ಸರಿದವು" ಎಂದು ಮಿ|| ಚರ್ಚಿಲ್‌ರವರು ಆಗಾಗ್ಗೆ ಹೇಳುತ್ತಿದ್ದರು. ಪಲಾಯನ ಸೂಕ್ತಪಡಿಸುವಾಗ ಯೋಜನೆಯಲ್ಲಿ ಬಂತು? ಶಿಸ್ತಿಲ್ಲಿ ಬಂತು? ಈ ಮಾತುಗಳನ್ನು ಓದಿದ ಜನ ಮೀಸೆಯ ತುದಿಯಲ್ಲೇ ನಗುತ್ತಿದ್ದರೆಂದು ಬೇರೆ ಹೇಳಬೇಕಾಗಿಲ್ಲ.

ಈ ಯೋಜನೆಗಳ ಹಾವಳಿ ಶಿಕ್ಷಣರಂಗಕ್ಕೂ ಹಬ್ಬಿದೆ. ವಧಾರ್ ಯೋಜನೆ, ಸಾರ್ಜೆಂಟ್‌ಯೋಜನೆ, ಮಾಂಟಿಸೋರಿ ಯೋಜನೆ, ಮುಂತಾದವು ಹಲವಾರು ಇವೆ. ಇವೆಲ್ಲವೂ ಚೆನ್ನಾಗಿವೆಯಂತೆ.

ಇತ್ತೀಚಿನ ಅತಿ ಹಚ್ಚ ಹೊಸದಾದ ಯೋಜನೆಯೊಂದು ಸಿದ್ಧವಾಗಿದೆ. ಇದರ ಹೆಸರು 'ಪಬ್ಲಿಪರ್ಪಸ್ ಸ್ಕೀಮ್' ಪರ್ಪಸ್‌ನಲ್ಲಿಯೇ ಸ್ಕೀಮ್ ಪಬ್ಲಿಯೋ ತಿಳಿಯದು. ಅಮೆರಿಕದಲ್ಲಿ ಮಕ್ಕಳಿಲ್ಲದವರಿಗೆ ಮಕ್ಕಳನ್ನು ಒದಗಿಸಲು ಒಂದು ಯೋಜನೆ ತಯಾರಿಸಿ, ಆ ಮೂಲಕ ಟೆಸ್ಟ್‌ಟ್ಯೂಬ್ ಬೇಬಿಗಳನ್ನು ತಯಾರಿಸುವ ಪದ್ಧತಿಯನ್ನು ಜಾರಿಗೆ ತಂದರು. ಈಗ ಈ ಅನಾಮಧೇಯ ಮಕ್ಕಳ ಜನಸಂಖ್ಯೆ ವಿಪರೀತವಾಗಿ ಹೆಚ್ಚಿರುವುದರಿಂದ, ಅವನ್ನು ಏನುಮಾಡಬೇಕು, ಯಾವರೀತಿ ಖರ್ಚುಮಾಡಬೇಕು, ಎಂಬ ವಿಚಾರಗಳ ಬಗ್ಗೆ ಮತ್ತೊಂದು ಯೋಜನೆಯನ್ನು ತಯಾರಿಸುತ್ತಿದ್ದಾರಂತೆ.

ಜನಗಳು ಸಿರಿವಂತರಾಗುವುದು ಯೋಜನೆಗಳ ಮೂಲಕ, ದಿವಾಳಿ ತೆಗೆಯುವುದು ಯೋಜನೆಗಳ ಮೂಲಕವೇ. ದೇಶದಲ್ಲಿ ಕಾಗದದ ಅಭಾವ ಹೆಚ್ಚಿರುವುದಕ್ಕೆ ಈ ಯೋಜನೆಗಳೇ ಕಾರಣವೆಂದು ತಿಳಿಯಬಂದಿದೆ.

'ನಾಡಿಗೇರ ಯೋಜನೆ' ಎಂಬುದೊಂದು ಸಿದ್ಧವಾಗಲಿದೆ. ಅದನ್ನು ಇಷ್ಟರಲ್ಲಿಯೇ ಹೊರಗೆಡಹುತ್ತೇನೆ. ನಾಟಕ ಕಂಪನಿಯವರು ಮೋಟುಗೋಡೆಯ ಮೇಲೆ ಅಂಟಿಸುವ ಭಿತ್ತಿಪತ್ರಿಕೆಗಳಂತೆ "ಶೀಘ್ರದಲ್ಲಿಯೇ ಬರಲಿದೆ."

# ವಾಗ್ವೈಖರಿ

ವೇದಿಕೆಗಳ ಮೇಲೆ ನನಗಾದ ಮತ್ತು ಇತರರಿಗಾದ ಕೆಲವು ಅನುಭವಗಳನ್ನು ಇಲ್ಲಿ ವಿವರಿಸುತ್ತೇನೆ. ಒಂದು ಸಾರಿ ಸಭೆಯೊಂದ ರಲ್ಲಿ ನಾನು ಮಾತನಾಡಬೇಕಾಗಿತ್ತು. ಕಾರ್ಯದರ್ಶಿ ಎನ್ನುವ ಪ್ರಾಣಿಯು ನನ್ನನ್ನು ಸಭಿಕರಿಗೆ ಪರಿಚಯಮಾಡಿಸಿಕೊಡುತ್ತ, ನಾನು ಎಂ. ಎ. ಪ್ಯಾಸ್ ಮಾಡಿರುವೆನೆಂತಲೂ, ವಿದೇಶಪ್ರವಾಸ ಮುಗಿಸಿ ರುವೆನೆಂತಲೂ ಹೇಳಿದ. ಅವನ ದಾಕ್ಷಿಣ್ಯ ಇಲ್ಲಿಗೇ ಮುಗಿಯಲಿಲ್ಲ. ನಾನು ಬರೆಯದೆ ಇದ್ದ ಕೆಲವು ಉದ್ಗ್ರಂಥಗಳ ಹೆಸರುಗಳನ್ನು ಹೇಳಿದ. ನನಗಾದ ಪಡಿಪಾಟ ಅಷ್ಟಿಷ್ಟಲ್ಲ. ಕಾರ್ಯದರ್ಶಿ ವಿವ ರಿಸಿದ ವ್ಯಕ್ತಿ ನಾನಲ್ಲವೆಂದು ಹೇಳಿದೆ. ನಾನು ಎಂ. ಎ. ಪ್ಯಾಸ್ ಮಾಡುವುದಿರಲಿ, ವಿಶ್ವವಿದ್ಯಾನಿಲಯದ ಮೆಟ್ಟಿಲನ್ನೇ ಹತ್ತಿದವನಲ್ಲ, ನನಗೆ ಪಾಠಹೇಳಿದ ಮೇಷ್ಟರುಗಳಿಗೆ ಎಂ. ಎ. ಪ್ಯಾಸ್ ಆಗಿತ್ತೋ ಇಲ್ಲವೋ ತಿಳಿಯದು. ಇನ್ನು ವಿದೇಶ ಪ್ರವಾಸದ ವಿಷಯ ನಾನೊಬ್ಬ ಬಡ ಪತ್ರಿಕೋದ್ಯಮಿ. ಸಾಲ ಹುಟ್ಟಿದಂಥ ಕಡೆಗಳಲ್ಲಿ ಸಾಲ ಮಾಡಿ ಕೀರ್ತಿಗಳಿಸಿದ್ದೇನೆ. ಈ ಸಾಲಗಾರರ ಕಾಟ ತಡೆಯ ಲಾರದೆ ವಿದೇಶವೇಕೆ ಉತ್ತರಧೃವಕ್ಕೆ ಹೋಗಲು ಸಹ ನಾನು ಸಿದ್ಧನಿದ್ದೇನೆ. ಆದರೆ ಪ್ರವಾಸ ಹೋಗಲು ಒಂದೇ ಕ್ಷುಲ್ಲಕಕಾರಣ ಅಡ್ಡ ಬಂದಿದೆ—ಏನೆಂದರೆ ಹಣ. ಇನ್ನು ನಾನು ಬರೆಯದೆ ಇದ್ದ ಉದ್ಗ್ರಂಥಗಳ ಪಟ್ಟಿಯ ವಿಷಯವಾಗಿಯೂ ತಿಳಿಸಿದೆ. ಕೃಷ್ಣರಾಯ ಎಂಬ ಹೆಸರಿನ ಬೇರೊಬ್ಬ ಗ್ರಂಥಕರ್ತರು ಆ ಪುಸ್ತಕಗಳನ್ನು ಬರೆದಿ ರುವುದಾಗಿ ನಾಚಿಕೆಯಿಲ್ಲದೆ ಹೇಳಿದೆ. ಆದಿನ ನಾನು ಪುಕ್ಕಾಲು

ಗಂಟೆ ಕಾಲ ಮಾತನಾಡಬೇಕಾಗಿತ್ತು. ಆದರೆ ಕಾರ್ಯದರ್ಶಿ ವಿವರಿಸಿದ ವ್ಯಕ್ತಿ ನಾನಲ್ಲವೆಂದು ತಿಳಿಸಲು ನನಗೆ ಮುಕ್ಕಾಲುಗಂಟೆ ಬೇಕಾಯಿತು. ನನ್ನ ಭಾಷಣದ ವಿಷಯ ಮಾತನಾಡಲು ಹತ್ತು ನಿಮಿಷಗಳನ್ನು ಕರುಣಿಸಬೇಕೆಂದು ಅಧ್ಯಕ್ಷರನ್ನು ಅಂಗಲಾಚಿದೆ. ನನ್ನ ಸಂಕಟ ನೋಡಲಾರದೆ ಅವರೊಪ್ಪಿದರು ಭಾಷಣದ ವಿಷಯಕ್ಕೆ ಪೀಠಿಕೆ ಹಾಕುವದರೊಳಗೆ ಹತ್ತು ನಿಮಿಷ ಮುಗಿಯಿತು. ನನಗಾಗಿ ಹಾಕಿದ್ದ ಪುರುಕು ಕುರ್ಚಿಯ ಮೇಲೆ ದೊಪ್ಪನೆ ಕುಳಿತುಕೊಂಡೆ. ಕಾರ್ಯದರ್ಶಿ ಮತ್ತು ಅಧ್ಯಕ್ಷರು "ನನ್ನ ಪಾಠ ಅಸ್ಖಲಿತವಾಗಿತ್ತೆಂದೂ, ಭಾಷಣವು ವಿಚಾರ ಪರಿಪ್ಲುತವಾಗಿತ್ತೆಂದೂ, ಒಟ್ಟಿನಲ್ಲಿ ಅದು ಅಮೋಘವಾಗಿತ್ತೆಂದೂ, ಹಿಂದೆಂದೂ ಅವರು ಇಂತಹ ಭಾಷಣ ಕೇಳಿರಲಿಲ್ಲವೆಂದೂ, ಮುಂದೆ ಕೇಳುವುದು ಅಸಂಭವವೆಂದೂ ತಮ್ಮ ಶಂಕೆಯನ್ನು ಸೂಚಿಸಿದರು.

ಆಗಸ್ಟ್ ಹದಿನೈದರಂದು ಸ್ವಾತಂತ್ರ್ಯ ಉತ್ಸವವನ್ನು ಕೋಳಿ ಕೂಗುವ ಪ್ರತಿ ಹಳ್ಳಿಯಲ್ಲಿಯೂ ಆಚರಿಸುತ್ತಾರಾದ್ದರಿಂದ ಭಾಷಣಕಾರರ ಅಭಾವ ಅತಿ ಹೆಚ್ಚಾಗುತ್ತದೆ. ಈಗ್ಗೆ ಎರಡು ವರ್ಷಗಳ ಕೆಳಗೆ ಒಂದೂರಿಗೆ ನನಗೆ ಆಹ್ವಾನದ ಕರೆ ಬಂತು. ಹೋದೆ. ಎಂದಿನಂತೆ ಕಾರ್ಯದರ್ಶಿ ಉತ್ಸವದ ಕಾರಣವನ್ನು ವಿವರಿಸಲಾರಂಭಿಸಿದ. ಮತ್ತು ಈ ಉತ್ಸವವನ್ನು ಇನ್ನೂ ಹೆಚ್ಚು ಕಳೆಕಟ್ಟಲು ಅನೇಕ ದೊಡ್ಡ ದೊಡ್ಡ ಭಾಷಣಕಾರರನ್ನು ಕರೆತರಲು ತಾವು ಶ್ರಮಿಸಿದ್ದನ್ನೂ, ಅವರೆಲ್ಲರೂ ಬೇರೆ ಬೇರೆ ಕಾರ್ಯಕ್ರಮಗಳಿಗೆ ಒಪ್ಪಿಕೊಂಡಿದ್ದರಿಂದ ನಿರ್ವಾಹವಿಲ್ಲದೆ ನನ್ನನ್ನು ಕರೆತಂದಿದ್ದಾಗಿ ತಿಳಿಸಿದರು. ಸಭಿಕರಿಗೆ ನನ್ನ ಬಗ್ಗೆ ಎಂಥ ಅಭಿಪ್ರಾಯ ಉಂಟಾಗಿರಬಹುದೆಂಬುದನ್ನು ನೀವೇ ಆಲೋಚಿಸಿ. ಹರಳೆಣ್ಣೆ ಕುಡಿದಂಥ ಮುಖವನ್ನು ನೋಡಿ ಕಾರ್ಯದರ್ಶಿಗೂ 'ಅಯ್ಯೋ ಪಾಪ' ಅನ್ನಿಸಿರಬೇಕು. ಮತ್ತೆ ಅವನು ತನ್ನ ಭಾಷಣವನ್ನು ಮುಂದುವರಿಸ್ಲಿ,

'ಪರವಾ ಇಲ್ಲ ಇವರೂ ಚೆನ್ನಾಗಿ ಮಾತನಾಡುತ್ತಾರೆ' ಅಂತ ಬೆರಳು ಮಾಡಿ ನನ್ನ ಕಡೆ ತೋರಿಸಿದ.

ನನ್ನ ಬಗ್ಗೆ ಉಂಟಾದ ಈ ದುರಭಿಪ್ರಾಯ ಹೋಗಲಾಡಿಸಲು ನಾನು ವಿಶೇಷವಾಗಿ ಶ್ರಮಿಸಬೇಕಾಯಿತು. ಒಳ್ಳೆಯ ಭಾಷಣ ಕಾರರು ಯಾರೂ ಸಿಗದಿದ್ದುದಕ್ಕೆ ಅಂದಿನ ಕಾರ್ಯಕ್ರಮ ಹೇಗೋ ಮುಗಿಸಲು ನನ್ನನ್ನು ಹಿಡಿದುಕೊಂಡು ಬಂದಿದ್ದಾರೆಂಬುದನ್ನು, ಪ್ರೇಕ್ಷಕವೃಂದವನ್ನು ನೋಡಿದ ಕೂಡಲೇ ನನಗೆ ತಿಳಿಯಿತು ಪಂಚ ಮಹಾಪಾತಕಗಳನ್ನು ನಾನು ಒಟ್ಟಿಗೇ ಮಾಡಿರಬೇಕೆಂದು ಅವರು ಕೆಟ್ಟ ಕಣ್ಣಿನಿಂದ, ದುರುದುರುನೆ ನನ್ನನ್ನು ತಿನ್ನುವಂತೆ ನೋಡುತ್ತಿದ್ದರು. ಅವರನ್ನು ಹೇಗಾದರೂ ಒಲಿಸಿಕೊಂಡು ನನ್ನ ಬಗ್ಗೆ ಮೂಡಿರುವ ದುರಭಿಪ್ರಾಯ ಹೋಗಲಾಡಿಸಲು ಅವರಿಂದ ನಗೆಯಲೆ ಹರಿಸಲು ಯೋಚಿಸಿದೆ. ಹರಿದಾಸರು ಹೇಳುವ ಹಾಗೆ ಒಂದು ಉಪ ಕಥೆ ಆರಂಭಿಸಿದೆ. "ಅತ್ಯಂತ ಸುಂದರ ತರುಣಿಯೊಬ್ಬಳಲ್ಲಿ ಒಬ್ಬ ಸಾಮಾನ್ಯ ತರುಣ ಅನುರಕ್ತನಾದ. ಆ ಹುಡುಗಿಯನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಅವಳ ತಂದೆಯಲ್ಲಿ ವಿನಯವಾಗಿ ಕೇಳಿಕೊಂಡ. ತಂದೆ ಭಾವೀ ಅಳಿಯನನ್ನು ಆಪಾದ ಮಸ್ತಕ ಪರ್ಯಂತ ಒಂದು ಬಾರಿ ನೋಡಿ ಹೀಗೆ ಹೇಳಿದ. 'ಹುಡುಗಿಗೆ ಅಲ್ಲಿ, ಇಲ್ಲಿ, ವರ ಹುಡುಕುತ್ತಿದ್ದೇವೆ. ಎಲ್ಲಿಯೂ ಒಳ್ಳೆಯ ವರ ಸಿಕ್ಕದಿದ್ದರೆ ಖಂಡಿತವಾಗಿಯೂ ನಿನಗೇ ಅವಳನ್ನು ಕೊಟ್ಟು ಮದುವೆ ಮಾಡುತ್ತೇನೆ' ಅಂತ ಹೇಳಿದ. ಹಾಗೆ ಈ ದಿನದ ಉಪನ್ಯಾಸ ಕನ್ಯೆಗೆ ಎಲ್ಲಿಯೂ ಒಳ್ಳೆಯ ವರ ದೊರೆಯದೆ, ನನ್ನ ಕೊರಳಿಗೆ ಅವ ಳಿಂದ ಮಾಲೆ ಹಾಕಿಸಿದ್ದೀರಿ. ಅಂತ ಹೇಳಿದೆ. ಜನ ಘೊಳ್ಳೆಂದಿತು. ನನ್ನ ಭಾಷಣವನ್ನು ಅಂದು ಇದೇ ಧಾಟಿಯಲ್ಲಿ ಮುಗಿಯಿಸಿದೆ.

ಕೆಲವು ಊರುಗಳಲ್ಲಿ ಕಸಬುದಾರ (Professional) ಅಧ್ಯಕ್ಷರಿರುತ್ತಾರೆ. ಊರಿನಲ್ಲಿ ನಡೆಯುವ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ಇವರು ವಹಿಸಬೇಕೆಂಬ ಹಂಬಲ ಅವರಿಗೆ, ಇದ

ಕ್ಕಾಗಿ ಅವರು ವಿಶೇಷವಾಗಿ ಪಡಿಪಾಟ ಬೀಳುತ್ತಾರೆ. ಸಭೆ ಯಾರಿಂದ ನಡೆಸುವುದೆಂಬುದನ್ನು ಹೇಗೋ ಪತ್ತೆ ಹಚ್ಚಿ ಅದರ ಕಾರ್ಯಕರ್ತರ ಬೆನ್ನು ಬೀಳುತ್ತಾರೆ. ಸಭೆಗೆ ಅವಶ್ಯವಾದ ಬೆಂಚು, ಕುರ್ಚಿ, ಜಮಖಾನೆ ಮುಂತಾದವುಗಳನ್ನು ತಮ್ಮ ಮನೆಯಿಂದಲೇ ಪೂರೈಸುತ್ತಾರೆ. ಹಾರ ತುರಾಯಿಗಳ ಖರ್ಚನ್ನು ತಾವೇ ವಹಿಸುತ್ತಾರೆ. ಈ ಮಾದರಿಯ ಅಧ್ಯಕ್ಷ ಭಾಷಣ ಯಾವಾಗಲೂ ಅಂದಿನ ವಿಷಯಕ್ಕೆ ಅನೇಕ ಗ್ರಾವುದ ದೂರ ಇರುತ್ತದೆ. ತಾವು ಬೊಂಬಾಯಿಗೆ ಹೋಗಿದ್ದಾಗ ನೆಹರೂರವರನ್ನು ನೋಡಿದ ವಿಚಾರ, ದೆಹಲಿಯಲ್ಲಿ ಸರದಾರ ಪಟೇಲರೊಡನೆ ಚರ್ಚಿಸಿದ ವಿಷಯ ಮುಂತಾದ ವಿಚಾರಗಳನ್ನೆಲ್ಲ ಹೇಳಿ ತಮ್ಮ ಭಾಷಣ ಮುಗಿಸುತ್ತಾರೆ. ಇದೇ ಮಾದರಿಯ ಕೆಲವು ಜನ ಅಧ್ಯಕ್ಷರು, ಭಾಷಣಕಾರನು ಹೇಳಿದ ಮಾತುಗಳನ್ನೇ ಗಿಳಿಪಾಠದಂತೆ ಒಪ್ಪಿಸಿ, ಅವರು ಹೇಳಿದ ಎಲ್ಲ ವಿಷಯಗಳೂ ಚೆನ್ನಾಗಿವೆಯೆಂದೂ, ಎಲ್ಲರೂ ಅದನ್ನು ಜ್ಞಾಪಕದಲ್ಲಿಡಬೇಕೆಂದೂ ಹೇಳುತ್ತಾರೆ.

ಕೆಲವು ಇಂಗ್ಲೀಷ್ ಕ್ಯಾಲೆಂಡರುಗಳಿರುತ್ತವೆ. ಇವುಗಳ ವೈಶಿಷ್ಟ್ಯವೇನೆಂದರೆ ಇವನ್ನು ದಿನವೂ ಹರಿದು ಹಾಕುವುದು. ಆದಿನದ ತಾರೀಖು, ವಾರ, ತಿಂಗಳು, ವರ್ಷ ಇದಿಷ್ಟು ಆ ಪುಟ್ಟ ಹಾಳೆಯಲ್ಲಿರುತ್ತೆ. ಇದಕ್ಕೆ 'ಟೇರಾಫ್' ಕ್ಯಾಲೆಂಡರ್ ಎಂದು ಹೇಳುತ್ತಾರೆ. ಈ ಕ್ಯಾಲೆಂಡರಿನ ಪ್ರತಿಹಾಳೆಯ ಕೆಳಭಾಗದಲ್ಲಿ ಮೇಧಾವಿಗಳ ಮತ್ತು ಪಂಡಿತರ ಮುಕ್ತಾಫಲಗಳಿರುತ್ತವೆ. ಷೇಕ್ಸ್‌ಪಿಯರ್, ಲಾಂಗ್‌ಫೆಲೊ, ಷೆಲ್ಲಿ, ಕೀಟ್ಸ್ ಮುಂತಾದವರ ಕೃತಿಗಳ ಕೆಲವು ಪಂಕ್ತಿಗಳನ್ನು ಇಲ್ಲಿ ಉದ್ಧರಿಸಲಾಗಿರುತ್ತದೆ. ಇವುಗಳಲ್ಲಿ ಕೆಲವನ್ನು (ಸುಲಭವಾದವನ್ನು ಅನ್ನಿ) ಉರು ಹೊಡೆದಿರುವುದು. ಭಾಷಣದಲ್ಲಿ ಹೆಜ್ಜೆ ಹೆಜ್ಜೆಗೂ, ಸಂದರ್ಭಕ್ಕನುಸಾರವಾಗಿರಲಿ ಅಥವಾ ಇಲ್ಲದಿರಲಿ, ಷೇಕ್ಸ್‌ಪಿಯರ್ ಹೀಗೆ ಹೇಳಿದ್ದಾನೆ, ಟೆನಿಸನ್ ಹೀಗೆ ಹೇಳಿದ್ದಾನೆ ಎಂತ ಹೇಳುತ್ತಿರುವುದು. ಇದರಿಂದ ಪ್ರೇಕ್ಷ

ಕರು ಅಧ್ಯಕ್ಷರ ಪಾಂಡಿತ್ಯಕ್ಕೆ ತಲೆದೂಗುತ್ತಾರೆ. ಒಂದುಸಾರಿ ಇಂಥ ಅಧ್ಯಕ್ಷ ಮಹಾಶಯರೊಬ್ಬರು ಜಾರ್ಜ್ ಇಲಿಯಟ್ ಹೀಗೆ ಹೇಳಿದ್ದಾನೆಂದು, ಜಾರ್ಜ್ ಇಲಿಯಟ್ನ ಕೆಲವು ಮಾತುಗಳನ್ನು ಉದ್ಧರಿಸಿದರು. ಜಾರ್ಜ್ ಇಲಿಯಟ್ ಹೆಂಗಸೆಂಬುದು ಅವರಿಗೆ ಗೊತ್ತಿರಲಿಲ್ಲ. ಕೂತಿದ್ದ ಪ್ರೇಕ್ಷಕ ವೃಂದಕ್ಕೂ ಗೊತ್ತಿರಲಿಲ್ಲ ಅನ್ನಿ.

ಕೆಲವು ಜನ ಭಾಷಣಕಾರರು ತಾವು ಭಾಷಣಮಾಡಲು ತೆಗೆದುಕೊಂಡ ಕಾಲದ ಮೇಲೆ ತಮ್ಮ ಭಾಷಣದ ಯೋಗ್ಯತೆಯನ್ನು ಒರೆ ಹಚ್ಚಿ ನೋಡುತ್ತಾರೆ. ತಾವು ಎಷ್ಟೆಷ್ಟು ಹೊತ್ತು ಹೆಚ್ಚು ಮಾತನಾಡಿದರೆ ಭಾಷಣ ಅಷ್ಟಷ್ಟು ಚೆನ್ನಾಗಿರುತ್ತದೆ, ಅಂತ ಭಾವನೆ ಅವರಿಗೆ. ಈ ಕಾರಣದಿಂದ ಭಾಷಣವು ಆರಂಭದಿಂದ ಕೊನೆಯ ವರೆಗೂ ಚರ್ವಿತ ಚರ್ವಣಗಳಿಂದ ತುಂಬಿರುತ್ತದೆ. ಒಂದು ಸಾರಿ ಇಂಥ ಚರ್ವಿತ ಭಾಷಣಕಾರರೊಬ್ಬರು ಒಂದೂವರೆ ಗಂಟೆ ಕಾಲ ಮಾತನಾಡಿ, ತಾವು ಎಷ್ಟು ಹೊತ್ತಿನವರೆಗೆ ಮಾತನಾಡಿದರೆಂಬು ದನ್ನು ತಿಳಿದುಕೊಳ್ಳಲು ಗಡಿಯಾರದ ಕಡೆ ನೋಡಿದರು. ಆಗ ಸಭಿಕರಲ್ಲೊಬ್ಬನು "ಗಡಿಯಾರ ಯಾಕೆ ನೋಡ್ತೀರ ಸ್ವಾಮೀ, ಕ್ಯಾಲೆಂಡರ್ ನೋಡಿ" ಎಂದ.

ಪ್ರತಿಸಭೆ ನಡೆಯಬೇಕಾಗಿದ್ದರೂ ಕೆಲವು ಶ್ರಾದ್ಧನಿಯಮ ಗಳಿವೆ. ಕಾರ್ಯದರ್ಶಿ ಅಥವಾ ಅಧ್ಯಕ್ಷನ ಮಗ ಅಥವಾ ಮಗಳು (ಸುಮಾರು ಎಂಟು ಅಥವಾ ಹತ್ತುವರ್ಷ ವಯಸ್ಸಿನ ಮಕ್ಕಳು) ಅಪ ಸ್ವರದಲ್ಲಿ "ಉದಯವಾಗಲಿ ಕನ್ನಡನಾಡು," ಅಥವಾ "ವನಸುಮ ದೊಳೆನ್ನ" ಗೀತೆ ಹೇಳುತ್ತಾರೆ. ಸಭೆ ಎಂದೇ ಆಗಲಿ ನಿರ್ದಿಷ್ಟ ವೇಳೆಗೆ ಆರಂಭವಾಗುವುದಿಲ್ಲ. ಸಾಮಾನ್ಯವಾಗಿ ಬಹಳ ಕಡಿಮೆ ಎಂದರೆ ಒಂದು ಗಂಟೆ ತಡವಾಗಿರುತ್ತದೆ. ಸಭಾಭವನದ ಹೊರಗೆ ಇಬ್ಬರು ಧಾಂಡಿಗರನ್ನು ನಿಲ್ಲಿಸಿರುತ್ತಾರೆ. ದುರದೃಷ್ಟವಶಾತ್ ರಸ್ತೆ ಯಲ್ಲಿ ಹೋಗುವವರನ್ನೆಲ್ಲ ಎಳೆತಂದು ಸಭಾಭವನದಲ್ಲಿ ಕೂಡಿಸು ವುದೇ ಅವರ ಕೆಲಸ. ವೇದಿಕೆಯ ಮೇಲೆ ಅಧ್ಯಕ್ಷ ಮತ್ತು ಭಾಷಣ

ಕಾರರಿಗಲ್ಲದೆ, ದೊಡ್ಡ ಮನುಷ್ಯರಿಗೆಂದು ಕೆಲವು ಕುರ್ಚಿಗಳನ್ನು ಹಾಕಿರುತ್ತಾರೆ. ಸಭೆಗೆ ಬಂದಿರುವರೆಲ್ಲ ದೊಡ್ಡ ಮನುಷ್ಯರೇ! ಇವರಿಗೆ ಕುರ್ಚಿಗಳನ್ನು ಒದಗಿಸುವದರಲ್ಲಿ ಕಾರ್ಯದರ್ಶಿ ಸುಸ್ತು ಹೊಡೆಯುತ್ತಾನೆ. ಆದಿನದ ಭಾಷಣದ ಉದ್ದಕ್ಕೂ ವೇದಿಕೆಗಳ ಮೇಲೆ ಕುಳಿತಿರುವ ದೊಡ್ಡ ಮನುಷ್ಯರ ಹೊಗಳಿಕೆಯು ಅವ್ಯಾಹತವಾಗಿ ಸಾಗಿರುತ್ತದೆ. ಮತ್ತು ಹೊಗಳಿಸಿಕೊಂಡವರು ತಮ್ಮ ಸರದಿ ಬಂದಾಗ ಆ ಉದ್ದದಿಂದ ಈ ಉದ್ದದವರೆಗೆ ಹಲ್ಲು ಕಿರಿಯುತ್ತಿರುತ್ತಾರೆ. ಈ ರೀತಿಯ ಭಾಷಣಗಳು ಸಮಯದ ಕಟ್ಟು ನಿಟ್ಟುಗಳಿಗೆ ಒಳಪಟ್ಟಿರುವುದಿಲ್ಲ. ವಾಷರ್ ಇಲ್ಲದ ನಲ್ಲಿಯ ನೀರಿನಂತೆ ಮಾತಿನಧಾರೆ ಹರಿಯುತ್ತಿರುತ್ತದೆ.

ಇಂಥ ಅನಿಯಮಿತ ಸಭೆಯೊಂದರಲ್ಲಿ ಜರುಗಿದ ಒಂದು ಪ್ರಸಂಗವನ್ನು ಹೇಳುತ್ತೇನೆ. ರಾತ್ರಿ ಏಳುಗಂಟೆಗೆ ಆರಂಭವಾದ ಸಭೆಯು ಸ್ವಾತಿ ಮಳೆಯಂತೆ ಸಾಗಿತ್ತು. ನನ್ನ ಆಪ್ತಗೆಳೆಯರೊಬ್ಬರ ಭಾಷಣ ಆ ದಿನ ಇತ್ತು. ಅವರ ಸರದಿ ಬರುವುದಕ್ಕೆ ಇನ್ನೂ ಬಹಳ ಹೊತ್ತು ಇತ್ತು. ಏಕೆಂದರೆ ಇನ್ನು ಮೂರು ನಾಲ್ಕು ಜನ ಭಾಷಣಕಾರರು ಮಾತನಾಡಬೇಕಾಗಿತ್ತು. ಮೊದಲೇ ಬೇಸಿಗೆ, ಸಭಾಭವನ, ಚಿತ್ರಮಂದಿರಗಳವರು ಹೇಳುವಂತೆ ಕಿಕ್ಕಿರಿದು ತುಂಬಿತ್ತು. ಸೆಕೆಯನ್ನು ತಾಳಲಾರದೆ ಹೊರಕ್ಕೆ ಬಂದೆ. ಮನೆಗೆ ಹೋಗೋಣವೆಂದರೆ ಮಿತ್ರನ ಭಾಷಣ ಮುಗಿದಿರಲಿಲ್ಲ. ಅಷ್ಟು ಹೊತ್ತಿಗೆ ಸೂಟು ಪೇಟಾಧಾರಿಯಾದ ಒಬ್ಬ ಮನುಷ್ಯ ಬಂದು ನನ್ನ ಹತ್ತಿರನಿಂತ. "ಸಭೆ ಮುಗಿಯುವುದು ಎಷ್ಟು ಹೊತ್ತಾಗುತ್ತದೆ?" ಎಂತ ಕೇಳಿದ. "ನೂರರಲ್ಲಿ ಒಂದು ಅಂಕೆಯನ್ನು ಹೇಳಿ?" ಅಂತ ಮರುಪ್ರಶ್ನೆ ಬಿಗಿದೆ. ಅವನು ದೀನಸ್ವರದಿಂದ "ಹೌದು ನೀವು ಹೇಳುವುದು ನಿಜ. ಇದು ಇಷ್ಟುಹೊತ್ತಿಗೇ ಮುಗಿಯುತ್ತದೆಂದು ಹೇಳುವುದಾದರೂ ಹೇಗೆ? ಅಥವಾ ಈದಿನವೇ ಮುಗಿಯುತ್ತದೆ ಎಂಬ ನಂಬಿಕೆಯಾದರೂ ಏನು? ಅಂತ ರಸ್ತೆಯ ಕಡೆ ಹೋದ. ಸುಮಾರು

ಮುಕ್ಕಾಲು ಗಂಟೆ ಆಗಿರಬಹುದು. ಆ ಮನುಷ್ಯ ಮತ್ತೆ ಬಂದ. "ಈ ಅನಿಷ್ಟಭಾಷಣ ಇನ್ನೂ ಮುಗಿದಿಲ್ಲವೇ?" ಅಂತ ಕೇಳಿದ. ಅವನು ತನ್ನ ಪ್ರಶ್ನೆಗೆ ಉತ್ತರವನ್ನು ಅಪೇಕ್ಷಿಸಿರಲಿಲ್ಲ. ನಾನು ಹೇಳಿದೆ. "ಸಭೆ ನಡೆಯುತ್ತಾ ಇರಲಿ, ನಿಮ್ಮ ಪಾಡಿಗೆ ನೀವು ಮನೆಗೇಕೆ ಹೋಗಬಾರದು" "ಇಲ್ಲ, ಹೋಗುವ ಹಾಗಿಲ್ಲ. ನೋಡಿ, ನನ್ನ ಹೆಂಡತಿ ಮಕ್ಕಳು ಈ ಸಭೆಗೆ ಬಂದಿದ್ದಾರೆ. ಅವರೆಲ್ಲೋ ಆ ಕೊನೆ ಮೂಲೆಯಲ್ಲಿ ಕೂತಿದ್ದಾರೆ. ಮನೆಯ ಬೀಗದ ಕೈ ನನ್ನ ಹೆಂಡತಿ ಹತ್ತಿರ ಇದೆ. ನನಗೆ ಏರ್‌ಕ್ರಾಫ್ಟ್‌ನಲ್ಲಿ ಕೆಲಸ. ಬೆಳಿಗ್ಗೆ ಒಂದಿಷ್ಟು ತಿಂದು ಮನೆ ಬಿಟ್ಟವನು. ತುಂಬಾ ಹಸಿವೆಯಾಗುತ್ತಿದೆ. ಮನೆ ಕಾಣೋಣವೆಂದರೆ ಅದಕ್ಕೂ ಗತಿಯಿಲ್ಲ ಇನ್ನೊಂದು ಸಾರಿ ಏನಾದರೂ ನನ್ನ ಹೆಂಡತಿ ಭಾಷಣಕ್ಕೆ ಹೋಗಲಿ ಅವಳನ್ನು ಸಿಗಿದು ತೋರಣ ಕಟ್ಟುತ್ತೇನೆ" ಎಂತ ಸಿಡಿಮಿಡಿಗುಟ್ಟಿದ.

ಸಣ್ಣ ಕತೆಗಾರರ ಸಮ್ಮೇಳನವೊಂದು ಈಗ್ಗೆ ಕೆಲವು ವರ್ಷಗಳ ಹಿಂದೆ ನಡೆಯಿತು. ಕತೆಗಾರರೆಲ್ಲ ತಮ್ಮ ಒಂದೊಂದು ಕತೆಯನ್ನು ಓದಬೇಕೆಂದು ನಿಶ್ಚಿತವಾಗಿತ್ತು. ಸಮ್ಮೇಳನ ಸಣ್ಣ ಕತೆಗಾರರದಾಗಿದ್ದರೂ ಅವರೆಲ್ಲರೂ ದೊಡ್ಡ ಕತೆಗಳನ್ನೇ ಓದಿದರು. ಕೆಲವು ನೀಳ್ಗತೆಗಳಾಗಿದ್ದವು. ಕೆಲವು ಕಿರುಕಾದಂಬರಿಗಳಾಗಿದ್ದವು. ಬೆಳಿಗ್ಗೆ ಎಂಟುಗಂಟೆಗೆ ಸಭೆ ಆರಂಭವಾಯಿತು. ಮಧ್ಯಾಹ್ನ ಒಂದುಗಂಟೆಯಾದರೂ ಸಭೆ ಮುಗಿಯಲಿಲ್ಲ. ಹೊತ್ತು ಏರಿದಂತೆ ಸಭಿಕರ ಸಂಖ್ಯೆಯೂ ಕಡಿಮೆಯಾಗುತ್ತಾ ಬಂತು ನನ್ನ ಕತೆ ಓದುವ ಸರದಿ ಬಂದಾಗ ಒಂದೂಕಾಲು ಗಂಟೆ ಆಗಿತ್ತು. ಮನೆಗೆ ಹೋಗೋಣವೆಂದು ಅಣಿಯಾದೆ ಅದರಲ್ಲಿ ಒಬ್ಬಿಬ್ಬರು ಗೆಳೆಯರು ನಮ್ಮ ಬೀದಿಯವರೇ ಆಗಿದ್ದರು. ಪಿಸುಮಾತಿನಲ್ಲಿ ಅವರಿಗೆ ಹೇಳಿದೆ "ಬನ್ನಿ ಮನೆಗೆ ಹೋಗೋಣ. ಈ ಸಭೆ ಎಷ್ಟು ಹೊತ್ತಿಗೆ ಮುಗಿಯುತ್ತದೋ ಏನೋ, ಹೊಟ್ಟೆಯಲ್ಲಿ ತಾಳಹಾಕುತ್ತಿದೆ." ಅದಕ್ಕವರು

ಹೇಳಿದರು "ನಾವೂ ಕತೆ ಓದಬೇಕು." ಆಮೇಲೆ ವಿಚಾರಿಸಿದ್ದರಲ್ಲಿ ಸಭೆಯಲ್ಲಿ ಕೂತಿದ್ದ ಹತ್ತು ಹನ್ನೆರಡು ಜನರೂ ಕತೆಗಳನ್ನು ಓದ ಬೇಕಾಗಿತ್ತಂತೆ.

ಕೆಲವುಸಾರಿ ಉತ್ತಮ ಭಾಷಣಕಾರರ ಉಪನ್ಯಾಸ ಏರ್ಪಾಡಾಗಿರುತ್ತದೆ ಅಭಿಮಾನದ ಮೇಲೋ, ಕಾರಣಾಂತರಗಳಿಂದಲೋ, ಊರಿನ ದೊಡ್ಡ ಮನುಷ್ಯರೊಬ್ಬರನ್ನು ಅಧ್ಯಕ್ಷರಾಗಿ ಆರಿಸುತ್ತಾರೆ. ಭಾಷಣಕಾರರಿಗೂ, ಅಧ್ಯಕ್ಷರಿಗೂ ಯಾವ ವಿಧವಾದ ಹೊಂದಾಣಿಕೆಯೂ ಇರುವುದಿಲ್ಲ. ಅಂದಿನ ಭಾಷಣದ ವಿಷಯವಾಗಿ ಅಧ್ಯಕ್ಷರು ಚಕಾರ ಶಬ್ದವನ್ನು ಸಹ ಉಚ್ಚರಿಸಲು ಸಮರ್ಥರಿರುವುದಿಲ್ಲ. ಭಾಷಣಕಾರನ ಕೀರ್ತಿ ಎಲ್ಲೆಡೆಗೂ ಹಬ್ಬಿರುತ್ತದೆಯಾದ್ದರಿಂದ ಜನ ಕಿಕ್ಕಿರಿದು ಸೇರಿರುತ್ತಾರೆ. ಅವನ ಭಾಷಣ ಕೇಳಲು ಜನ ತೆರೆದಬಾಯಿ ಅಗಲಿಸಿದಕಿವಿಯಿಂದ ಕೂತಿರುತ್ತಾರೆ. ಪ್ರಾರ್ಥನೆ ಪರಿಚಯ ಭಾಷಣಗಳು ಹಾಗೂ ಹೀಗೂ ಸಾಗುತ್ತವೆ. ಭಾಷಣಕಾರನ ಉಪನ್ಯಾಸ ಆರಂಭವಾಗುತ್ತದೆ. ಆತನಿಗೆ ಎಲ್ಲಿಲ್ಲದಸ್ವಾಗತ, ಚಪ್ಪಾಳೆಯ ಸುರಿಮಳೆ. ಅವನ ಭಾಷಣ ಮುಗಿಯುತ್ತದೆ. ಅಧ್ಯಕ್ಷರು ಭಾಷಣ ಮಾಡಲು ಎದ್ದಕೂಡಲೇ ಜನರೆಲ್ಲರೂ ಕಂಬಿ ಕೀಳುತ್ತಾರೆ. ಅವರು ಆರೀತಿ ಹೋಗಕೂಡದೆಂದು ಕಾರ್ಯದರ್ಶಿ ಬೊಬ್ಬೆ ಇಕ್ಕುತ್ತಿರುತ್ತಾನೆ. ಈ ದೃಶ್ಯ ದೇವರಿಗೇ ಪ್ರೀತಿ.

ಚುನಾವಣಾ ಭಾಷಣಗಳ ವಾಗ್ವೈಖರಿಯು ಬಹು ವಿಚಿತ್ರವಾಗಿರುತ್ತದೆ ಎದುರಾಳಿಗಳನ್ನು ಬಯ್ಯುವುದೇ ಈ ಭಾಷಣಗಳ ಉದ್ದೇಶ. ಎದುರಾಳಿಯ ಅಂತರಂಗ ಜೀವನವನ್ನೆಲ್ಲ ಬಹಿರಂಗಪಡಿಸುವುದು, ಆತನು ಮಾಡಿದ, ಮಾಡದೆ ಇದ್ದ ದುಷ್ಕೃತ್ಯಗಳನ್ನೆಲ್ಲ ಬಹಿರಂಗಪಡಿಸುವುದು. ಇಡೀ ಭಾಷಣವು ಸುಳ್ಳು. ಅರ್ಧಸತ್ಯ ಮತ್ತು ಪೂರ್ಣ ಸತ್ಯಗಳಿಂದ ಕೂಡಿರುತ್ತದೆ. ಎದುರಾಳಿಯ ಹೆಂಡತಿ ಏನಾದರೂ ಈ ಭಾಷಣಕ್ಕೆ ಬಂದಿದ್ದರೆ ಆಕೆ ತನ್ನ ಗಂಡನೊಂದಿಗೆ ದಾಂಪತ್ಯ ವಿಚ್ಛೇದನ ಮಾಡಿಕೊಳ್ಳಲು ನ್ಯಾಯಾಸ್ಥಾನದ ಕಟ

ಹತ್ತುವುದು ಖಂಡಿತ. ತಾವು ಆರಿಸಿ ಬಂದಲ್ಲಿ ಏನೇನು ಕಡಿದು ಕಟ್ಟಿ ಹಾಕುತ್ತೇವೆಂದು ವಚನ ಕೊಟ್ಟಿರುತ್ತಾರೆ. ಈ ಜನಗಳಿಗೆ ವಚನಕೊಡುವ ಹೊಣೆಗಾರಿಕೆ ಮಾತ್ರ ಇರುತ್ತದೆ. ಆದರೆ ಅದನ್ನು ಉಳಿಸಿಕೊಳ್ಳುವುದು ಅವರ ಜವಾಬ್ದಾರಿಯಲ್ಲ.

ಸ್ಕೂಲು ಕಾಲೇಜುಗಳಲ್ಲಿ ನಡೆಯುವ ಆರಂಭ ಭಾಷಣ ಮತ್ತು ಮುಕ್ತಾಯ ಭಾಷಣಗಳು ಹುಡುಗರು ಬರೆಯುವ ಕಾಪಿ ಪುಸ್ತಕದ ಮೇಲ್ಪಂಕ್ತಿಗಳಂತೆ ಇರುತ್ತವೆ. ದೇವರಲ್ಲಿ ಭಕ್ತಿಯಿಡು, ಪ್ರಾಣಿಗಳಲ್ಲಿ ದಯೆತೋರು ಅನ್ನುವ ರೀತಿಯಲ್ಲಿ, ವಿದ್ಯಾರ್ಥಿಗಳು ಶಿಸ್ತಿನ ಶಿಪಾಯಿಗಳಾಗಿರಬೇಕು. ರಾಜಕೀಯದಲ್ಲಿ ಭಾಗವಹಿಸಬಾರದು ಎಂಬುದಾಗಿ ಹೇಳುತ್ತಿರುತ್ತಾರೆ. ಆದಿನದ ಭಾಷಣ ಮಾಡಲು ಬಂದ ಮಹಾಶಯ ತಾನು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಪರೀಕ್ಷೆಗಳಲ್ಲಿ ಕಾಪಿ ಹೊಡೆದು ಆರುಬಾರಿ ಡಿಬಾರ್ ಆಗಿರುತ್ತಾನೆ. ಪ್ರತಿಕ್ಲಾಸಿನಲ್ಲಿಯೂ ವೀರಸತ್ಯಾಗ್ರಹಿಯಂತೆ ಅನೇಕ ವರ್ಷಗಳವರೆಗೆ ಕುಳಿತಿರುತ್ತಾನೆ. "ಏನಕೇನ ಕಾರಣೇಣ ಕಿಂಪುರಷೋಪ್ರಸಿದ್ಧೋಭವ" ಎಂಬಂತೆ, ಯಾವುದೋ ಕಾರಣದಿಂದ ಈಗ ಒಂದು ಉನ್ನತ ಸ್ಥಾನಕ್ಕೆ ಬಂದು ಪರೋಪದೇಶಪಾಂಡಿತ್ಯದಲ್ಲಿ ನಿರತನಾಗಿರುತ್ತಾನೆ.

ವೇದಾಂತ, ಗೀತೆ ಮತ್ತು ಆಧ್ಯಾತ್ಮಿಕ ಸಂಬಂಧವಾದ ಭಾಷಣಗಳಲ್ಲಿ ಈಗಿನ ಕಾಲದ ಯುವಕ ಯುವತಿಯರನ್ನು ಬಯ್ಯುವುದು ಯಥೇಷ್ಟವಾಗಿ ಸಾಗಿರುತ್ತದೆ. ಕ್ರಾಪು ಬಿಡಿಸುವುದು, ಹೋಟೆಲ್ ಮತ್ತು ಸಿನಿಮಾಗಳಿಗೆ ಹೋಗುವುದು, ಬೀಡಿ ಸಿಗರೇಟ್‌ಗಳನ್ನು ಸೇದುವುದು ಈ ಬಗ್ಗೆ ಯುವಕರನ್ನು ಬಯ್ಯುತ್ತಾರೆ ಅರಿಶಿನಕ್ಕೆ ಬದಲು ಪೌಡರ್ ಹಚ್ಚಿಕೊಳ್ಳುವುದು, ಮಧ್ಯೆ ಬೈತಲೆ ತೆಗೆಯದೆ ಓರೆ ಬೈತಲೆ ತೆಗೆಯುವುದು. ಮುಂತಾದ ವಿಚಾರಗಳ ಬಗ್ಗೆ ಯುವತಿಯರು ಬೈಸಿಕೊಳ್ಳಬೇಕಾಗುತ್ತದೆ. ಈ ವೇದಾಂತ ವಿಚಾರ ಭಾಷಣಗಳಲ್ಲಿ ವೇದಾಂತ ವಿಚಾರವನ್ನೊಂದನ್ನುಳಿದು ಬೇರೆ ಎಲ್ಲಾ ವಿಷಯಗಳೂ ಇರುತ್ತವೆ.

# ದೇವರ ಸರ್ವಾಂತರ್ಯಾಮಿತ್ವ

ಕಲಿಯುಗದಲ್ಲಿ ಪವಾಡಗಳು ಇಲ್ಲವೆಂತಲೂ ದೇವರು ಪ್ರತ್ಯೇಕನಾಗುವುದಿಲ್ಲವೆಂತಲೂ ಹೇಳುತ್ತಾರೆ. ಈ ಮಾತನ್ನು ನಾವು ಒಂದು ರೀತಿಯಲ್ಲಿ ನಂಬಬಹುದಾದರೂ, ಇನ್ನೊಂದು ರೀತಿಯಲ್ಲಿ ಒಪ್ಪಲು ಸಾಧ್ಯವಿಲ್ಲ. ಯಾವುದಾದರೂ ಒಂದು ತಮಿಳು ಚಿತ್ರ ನೋಡಿದಾಗ ದೇವರ ಅಸ್ತಿತ್ವ ಮತ್ತು ಅವನ ಸರ್ವಾಂತರ್ಯಾಮಿತ್ವದ ಬಗ್ಗೆ ನಮಗೆ ಯಾವ ಸಂದೇಹವೂ ಉಳಿಯುವುದಿಲ್ಲ.

ತಮಿಳು ಭಾಷೆಯ ಪೌರಾಣಿಕ ಚಿತ್ರವಾಗಲಿ, ಸಾಮಾಜಿಕ ಚಿತ್ರವಾಗಲಿ ಅಥವಾ ಐತಿಹಾಸಿಕ ಚಿತ್ರವಾಗಲಿ, ಚಿತ್ರ ನಡೆಯುವ ಕಾಲದ ಇಷ್ಟಿಷ್ಟು ಅವಧಿಯಲ್ಲಿ ದೇವರು ಪ್ರತ್ಯಕ್ಷನಾಗಬೇಕೆಂಬ ಒಂದು ನಿಯಮವಿದೆ ಇದು ತ್ರೈರಾಶಿಯ ಲೆಕ್ಕವಿದ್ದಂತೆ. ಒಂದೊಂದು ಚಿತ್ರದಲ್ಲಿ ಹತ್ತು ನಿಮಿಷಕ್ಕೊಂದು ಬಾರಿ, ಕೆಲವರಲ್ಲಿ ಹದಿನೈದು ನಿಮಿಷಕ್ಕೊಂದು ಬಾರಿ ದೇವರು ಪ್ರತ್ಯಕ್ಷವಾಗಲೇಬೇಕು ಇದು ಪ್ರಗ್ರಸ್ಥಾಯಿಯಾದ ದೇವಸ್ಥಾನ, ಹರಿಕಥೆಗಳಿಗೆ ಬಂದು ಹೋಗುವಂತೆ ಸಿನಿಮಾ ಮಂದಿರಗಳಿಗೂ ಜನರು ಹೋಗುತ್ತಾರೆಂದು ನಮ್ಮ ಚಿತ್ರ ನಿರ್ಮಾಪಕರ ಭಾವನೆ.

ಚಿತ್ರದ ನಾಯಕ ನಾಯಕಿಗಿಂತ ದೇವರ ಪಾತ್ರ ವಹಿಸಿರುವ ನಟನಿಗೆ ಹೆಚ್ಚು ಸಂಬಳವಂತೆ, ಕಾರಣ—ಅವನಿಗೆ ಹೆಚ್ಚು ಕೆಲಸ ಮತ್ತು ಶ್ರಮ.

ದೇವರ ಶ್ರಮ ಕುರಿತು ಇಲ್ಲಿ ಕೊಂಚ ವಿವರಣೆ ಕೊಡುವುದು ಅಗತ್ಯವಾಗಿದೆ. ವಿಷ್ಣು ಅಥವಾ ಕೃಷ್ಣನ ಪಾತ್ರಧಾರಿಯಾದವನ

ಮೊದಲು ಬಿಳಿಯ ಬಣ್ಣವನ್ನು ಮುಖ ಕೈ ಕಾಲುಗಳಿಗೆ ಹಚ್ಚಿಕೊಳ್ಳ ಬೇಕು. ಆದರೆ ಮೇಲೆ ನೀಲಿಬಣ್ಣವನ್ನು ಮತ್ತೆ ಹಚ್ಚಿಕೊಳ್ಳಬೇಕು. ವಿಷ್ಣುವಿನ ಪಾತ್ರ ಧರಿಸಿದಾಗ ತಗಡಿನ ಕಿರೀಟ, ರಟ್ಟಿನ ಕೈಗಳನ್ನು ಹೊತ್ತುಕೊಂಡು ಅಡ್ಡಡ್ಡಲಾಗಿ ಏಡಿಯಂತೆ ನಡೆಯಬೇಕಾಗುತ್ತದೆ. ಕೆಲವೊಂದು ಸಾರಿ ಶೇಷಶಾಯಿಯಾಗಿ ರಟ್ಟಿನ ಹಾವಿನ ಮೇಲೆ ಮಲಗಬೇಕಾಗುತ್ತದೆ. ತಂತಿಗಳಿಂದ ಕಟ್ಟಿ ತೂಗಾಡುವ ರಟ್ಟಿನ ಗರುಡನನ್ನು ಏರಬೇಕಾಗುತ್ತದೆ.

ಸಾಮಾನ್ಯವಾಗಿ ದೇವರ ಪಾತ್ರ ವಹಿಸಿದವನು ಹೆಚ್ಚು ಮಾತುಗಳನ್ನು ಗಟ್ಟಿಮಾಡಬೇಕಾದ್ದಿಲ್ಲ. "ಭಕ್ತಾ ಭಯಬಡಾದಿ" (ಭಕ್ತನೇ ಹೆದರಬೇಡ) ಎಂದು ಹೇಳುತ್ತಿದ್ದರೆ ಸಾಕು. ಭಕ್ತನಿಗೆ ಅಭಯ ನೀಡುವಂತೆ ಬಲಗೈಯನ್ನು ತೋರುತ್ತಿರಬೇಕು. ರೈಲ್ವೆ ಗೇಟಿನಲ್ಲಿರುವ ವಾಚ್‌ಮನ್, ರೈಲು ಹೋಗುವಾಗ ಬಲಗೈ ಎತ್ತಿರುವಂತೆ ಈ ಭಂಗಿಯಿರಬೇಕು ಎಲ್ಲಕ್ಕೂ ಮಿಗಿಲಾಗಿ ದೇವರ ಪಾತ್ರಧಾರಿಯಾದವನ ಮುಖದ ಮೇಲೆ ಅಳಿಸದ ಒಂದು ನಗೆ ಇದ್ದೇ ತೀರಬೇಕು.

ಈಶ್ವರನ ಪಾತ್ರಧಾರಿಯಾದವನು ಸಾಮಾನ್ಯವಾಗಿ ಮಧ್ಯ ವಯಸ್ಸು ದಾಟಿರಬೇಕು—ಸುಮಾರು ನಲವತ್ತು ವರ್ಷಗಳಿರಬೇಕು. ಯಾವ ಚಿತ್ರದಲ್ಲಿಯೂ ಎಳೆಯ ವಯಸ್ಸಿನ ಈಶ್ವರನನ್ನು ನಾನು ನೋಡಿಲ್ಲ. ವಿಷ್ಣು ಪಾತ್ರವಹಿಸುವವನು ಇಪ್ಪತ್ತು-ಇಪ್ಪತ್ತೈದು ವರ್ಷದವನಿರಬೇಕು.

ಈಶ್ವರನ ಪಾತ್ರಧಾರಿಯಾದವನ ಮುಖ ಗುಂಡಗೆ ಕಂಪಾಸಿನಿಂದ ಕೊರೆದಂತಿರುತ್ತದೆ. ವಿಷ್ಣುವಿನದು ಕೋಲುಮುಖ. ವಿಷ್ಣುವಿಗೆ ಇರುವಷ್ಟು ಚಾಕಚಕ್ಯ (ಹುಬ್ಬುಹಾರಿಸುವುದು) ಈಶ್ವರನಿಗೆ ಇರುವುದಿಲ್ಲ.

ಪ್ರಸಿದ್ಧ ಪತ್ತೇದಾರಿ ಕಾದಂಬರಿಗಳಲ್ಲಿ ಯಾವ ಕಾಲಕ್ಕೆ ಯಾವ ವ್ಯಕ್ತಿ ಬರುತ್ತಾನೆಂದು ಹೇಳಲು ಸಾಧ್ಯವಿಲ್ಲ. ಆದರೆ

ತಮಿಳು ಚಿತ್ರದಲ್ಲಿ ದೇವರು ಯಾವಾಗ ಪ್ರತ್ಯಕ್ಷನಾಗುತ್ತಾನೆಂದು ಅತಿ ಸುಲಭವಾಗಿ ಹೇಳಬಹುದು. ಕೆಲವೊಂದು ಸಾರಿ ದಿವ್ಯವಾದ ಬೆಳಕು ಬೀಳುತ್ತದೆ. ಮತ್ತೊಂದು ಸಾರಿ ಗುಂಡುಹೊಡೆದ ಶಬ್ದ ವಾಗುತ್ತದೆ. ದೇವರು ಪ್ರತ್ಯಕ್ಷನಾಗಬೇಕಾದರೆ ಇಷ್ಟೆಲ್ಲ ಗಲಾಟೆಗಳು ಏಕಾಗಬೇಕೋ ನನಗೆ ತಿಳಿಯದು.

ಕೆಲವುಸಾರಿ ದೇವರು ಪ್ರತ್ಯಕ್ಷನಾಗಬೇಕಾದರೆ ಒಂಟಿಯಾಗಿ ಮತ್ತೆ ಕೆಲವು ಸಾರಿ, ಲಗ್ನಪತ್ರಿಕೆಗಳಲ್ಲಿ ಬರೆದಿರುವಂತೆ ಸಕುಟುಂಬ ಸಪರಿವಾರವಾಗಿ ಪ್ರತ್ಯಕ್ಷನಾಗುತ್ತಾನೆ. ಒಬ್ಬ ಭಕ್ತನ ಉದ್ಧಾರಕ್ಕೆ ದೇವರ ಮನೆ ಮುಂದಿಯೆಲ್ಲ ಬರಬೇಕಾಗುತ್ತೆ.

ಸರ್ಕಾರಿ ಅಧಿಕಾರಿಗಳು, ಶ್ರೀಮಂತರು, ಅರಸರು, ಸಚಿವರು ಮುಂತಾದವರನ್ನು ಭೇಟಿಮಾಡುವುದು ಕಷ್ಟವಾಗುತ್ತದೆ. ಆದರೆ ತಮಿಳು ಚಿತ್ರದ ದೇವರಷ್ಟು ಅಗ್ಗದ ಪ್ರಾಣಿ ಈ ಪ್ರಪಂಚದಲ್ಲಿಯೇ ಇಲ್ಲ. ಕರೆದಲ್ಲಿ—ಅದು ದನದ ಕೊಟ್ಟಿಗೆಯಾಗಿರಲಿ, ಅಡಿಗೆಮನೆ ಯಾಗಿರಲಿ ದೇವರು ನಾಚಿಕೆಯಿಲ್ಲದೆ ಬಂದು ಬಿಡುತ್ತಾನೆ. ಭಕ್ತನ ಉದ್ಧಾರಕ್ಕೆ ಅವನು ಸೊಂಟಕಟ್ಟಿ ನಿಂತಿರುತ್ತಾನೆ. ಪವಾಡಗಳ ಪರಂಪರೆಗಳನ್ನೇ ಆರಂಭಿಸುತ್ತಾನೆ.

ಆಸ್ತಿಕತೆ ಅಳಿಯುತ್ತಿರುವ ಈ ಕಾಲದಲ್ಲಿ ದೇವರ ವಿಚಾರದಲ್ಲಿ ನಂಬಿಕೆ ಮತ್ತು ಭಕ್ತಿ, ಚಿತ್ರಗಳ ಮೂಲಕ ಹೆಚ್ಚುವುದೆಂದು ಅನೇಕರು ತಪ್ಪು ಭಾವಿಸಿದ್ದಾರೆ. ಈ ಚಿತ್ರಗಳನ್ನು ನೋಡಿದಾಗ ದೇವರ ವಿಷಯದಲ್ಲಿ ನನ್ನ ಸದ್ಭಾವನೆಗಳೆಲ್ಲ ಪುಡಿ ಪುಡಿಯಾಗುತ್ತವೆ. ನಾವು ಮನೋರಾಜ್ಯದಲ್ಲಿ ಕಲ್ಪಿಸಿಕೊಂಡಿದ್ದ ವಿಷ್ಣು, ಈಶ್ವರ, ಸೀತೆ, ಪಾರ್ವತಿ ಮುಂತಾದವರು ವಕ್ರ ವಕ್ರವಾಗಿ ತೆರೆಯಮೇಲೆ ಬಂದಾಗ ನಮ್ಮ ಆಸ್ತಿಕತೆಗೆ ಬಲವಾದ ಕೊಡಲಿ ಪೆಟ್ಟು ಬೀಳುತ್ತದೆ.

ಮದ್ರಾಸ್ ಸರ್ಕಾರದವರು ಚಿತ್ರಗಳಲ್ಲಿನ ದೇವರ ಹಾವಳಿಯನ್ನು ತಡೆಗಟ್ಟಲು ಒಂದು ಶಾಸನವನ್ನೇ ಜಾರಿಯಲ್ಲಿ ತರಲಿ

ದ್ದಾರೆಂದು ತಿಳಿಯಬಂದಿದೆ. ಇದು ಆದಲ್ಲಿ ನಮಗೂ ಕ್ಷೇಮ, ದೇವರಿಗೂ ಕ್ಷೇಮ.

ಕಟ್ಟಕಡೆಯದಾಗಿ ಒಂದು ಮಾತು: ಪೌರಾಣಿಕ ಚಿತ್ರಗಳನ್ನು ತಯಾರಿಸಕೂಡದೆಂದು ನಾನು ವಾದಿಸುತ್ತಿದ್ದೇನೆಂದು ಯಾರೂ ಭಾವಿಸಕೂಡದು. ನಮ್ಮ ಚಿತ್ರಗಳ ಮಟ್ಟ ಹೆಚ್ಚಲಿ, ದೇವರ ಮರ್ಯಾದೆ ಉಳಿಯಲಿ, ಅವನ ಅವಹೇಳನೆ ಬೇಡ ಎಂಬುದೇ ನನ್ನ ಉದ್ದೇಶ.



# ದಿನಪತ್ರಿಕೆ—ಕವಿತೆಯಲ್ಲಿ

ಬಿಸಿಲು ಹೆಚ್ಚಿದಂತೆ ನಾಯಿಗಳಿಗೆ ಹುಚ್ಚು ಹಿಡಿಯುತ್ತವೆಯಂತೆ. ನನಗೂ ಒಮ್ಮೊಮ್ಮೆ ಬಿಸಲಿನ ಕಾವು ಹೆಚ್ಚಿತೆಂದರೆ ಅದು ಕವಿತಾರೂಪದಲ್ಲಿ ಬಗುಳಲಾರಂಭಿಸುತ್ತದೆ ಈಚೆಗ ನಮ್ಮಲ್ಲಿ ಪತ್ರಿಕೆಗಳು ಅತಿ ಹೆಚ್ಚಾಗಿವೆ. ಆದರೆ ಎಲ್ಲ ಪತ್ರಿಕೆಗಳೂ ಗದ್ಯ ರೂಪದಲ್ಲಿ ಹೊರಡುತ್ತವೆ. ಪದ್ಯರೂಪದಲ್ಲಿ ಒಂದು ದಿನಪತ್ರಿಕೆ ಸಹ ಇಲ್ಲ. ಈ ಕೊರತೆಯನ್ನು ನೀಗಿಸಲು ನಾನೊಂದು ನೂತನ ಪ್ರಯೋಗ ಮಾಡಿದ್ದೇನೆ. ಕವಿತಾ ರೂಪದಲ್ಲಿ ಪತ್ರಿಕೆ ಹೊರಡಿಸುವುದು ಸಾಧ್ಯವಿದೆಯೆಂದು ಈ ಬರಹದ ಮೂಲಕ ತೋರಿಸಿಕೊಡುವುದೇ ನನ್ನ ಉದ್ದೇಶ.

ರಾಜ್ಯಾಂಗ ಸಭೆಯಲ್ಲಿ ಶ್ರೀ ಕಾಮತ್‌ರವರು ಭಾರತದ ವಿದೇಶಾಂಗ ನೀತಿಯ ಬಗ್ಗೆ ಪಂಡಿತ ನೆಹರೂರವರನ್ನು ಪ್ರಶ್ನಿಸುತ್ತಾರೆ. ಆಗ ನೆಹರೂರವರು ಉತ್ತರಕೊಡುತ್ತಾ :

ಎಲೆಕಾಮತನೆ ಕೇಳ್ ಹೆರವರಾ ರಾಜ್ಯವು ನಮಗೆಬೇಡ
ನಮ್ಮ ರಾಜ್ಯದ ಮೇಲೆ ಇನ್ನೊಬ್ಬರು ಬಿದ್ದರೆ
ಖಡ್ಗವ ಹಿರಿವೆವು ಎಂದನಾ ನೆಹರೂ

ಯಾವುದೋ ಊರಿನಲ್ಲಿ ನಲ್ಲಿಗಳು ನಿಂತು ನೀರಿಲ್ಲದೆ ತೊಂದರೆ ಆದುದನ್ನು ಈ ರೀತಿ ಕವಿತೆಯಲ್ಲಿ ಹೇಳಬಹುದು.

ಊರನಲ್ಲಿಗಳು ನಿಂತು, ಪುರಪಿತೃಗಳಿಗೆ
ಬೊಬ್ಬೆಯಿಕ್ಕಿ ಊರ ಮಹಿಳೆಯರು ಕ್ರಾಂತಿಮಾಡಿ
ದೂಳನೆಬ್ಬಿಸಿದರು

ಹಳ್ಳಿಗಳಿಗೆ ಮಂತ್ರಿಗಳು ಬಂದಾಗ ನಡೆದ ಸಮಾರಂಭದ ವರ್ಣನೆ;—

ಮಂಟಪಕೆ ಮಂತ್ರಿಗಳು ಆಗ ಮಾಡಿಸೆ ಊರಗೌಡ
ಹಾರಹಾಕಿ ಕರವಮುಗಿದು ಇಂತೆಂದನು.
ಸಚಿವೋತ್ತಮನೆಕೇಳ್ ನಮ್ಮ ತಾಲ್ಲೂಕಿನ ಡಿಪೋದಲ್ಲಿ
ಅಕ್ಕಿಯಾಕಾಣದೆ ಪುಕ್ಕರಾಗಿಹೆವೆಂದಾನಾ ಗೌಡ

ಚೀನೀ ಕಮ್ಯೂನಿಸ್ಟರು ಜನರಲ್ಲಿಸ್ಸಿಮೊ ಚಿಯಾಂಗ್ ಕೈಷೇಕ್ ಮುಂತಾದವರನ್ನು ಸೆರೆಹಿಡಿಯಬೇಕೆಂದು ಆಜ್ಞೆಕೊಟ್ಟ ವಿವರ:—

ದುಷ್ಟ ಕಮ್ಯೂನಿಸ್ಟರು ಕೈಶೇಕನಾ ಸೆರೆಹಿಡಿಯಲು
ಆಜ್ಞೆ ಇತ್ತಿಹರು, ಅಲ್ಲಲ್ಲಿ ಉಪದಳವ ಕೊಡುತ್ತ
ಮುಂದೆ ಸಾಗಿಹ ಸೋಜಿಗವ ನೋಡೆಂದಾ

ಜಾಹೀರಾತುಗಳನ್ನು ಸಹ ಕವಿತೆಯಲ್ಲಿ ಹಾಕಬಹುದು:

ಸ್ಟೇನರ ಕಾಫಿ
ಕುಡಿಯೋ ಪಾಪಿ
ಕೆಟ್ಟ ಕಾಫಿಯು ಕುಡಿದು
ಹಗಲೂ ರಾತ್ರಿ ದುಡಿದೂ
ನಿನ್ನಗತಿ ಏನು
ನೀನೇ ಹೇಳು

ಪತ್ರಿಕೆಯ ಏಜನ್ಸಿ ಬದಲಾವಣೆ ವಿಚಾರದಲ್ಲಿ :

ಬಳ್ಳೂರಿನ ಏಜಂಟನು ಒಳ್ಳೆಯವನಾಗಿಲ್ಲವು
ಸುಳ್ಳು ಹೇಳುವುದು ಅವನ ಕುಲಧರ್ಮವಾಗಿಹದು
ಈ ಊರಿನ ಏಜನ್ಸಿಗೆ ಪತ್ರಬರೆಯಲು
ಕೋರಿಹನು ವ್ಯವಸ್ಥಾಪಕನು

ಸ್ಟಾಲಿನ್ನನ ಅಟಾಟೋಪ ಭಾಷಣ :

ಚರ್ಚಿಲ್ಲರ ಉದ್ಧಟ ಸಾಕು, ಗಡ ಅವಯುದ್ಧ
ಪ್ರೇಮಿ, ನಮ್ಮಸ್ನೇಹ ಹಸ್ತವ ಧಿಕ್ಕರಿಸುವ
ಬೆವಿನ್ ಸಾಮಾನ್ಯನೇ ? ಖಡ ಖಡ ಇದು
ಸಲ್ಲದು, ಇದು ಸಲ್ಲದು-ಎಂದು ಘರ್ಜಿ
ಸಿದನಾ ಲೋಹಮಾನವನು

# ಬೇಸ್ತು

"ಜಂಕ್ಷನ್ ಬಂತು ಹುಷಾರಾಗಿರಿ, ಯಾರನ್ನೂ ಒಳಕ್ಕೆ ಬಿಡ ಬೇಡಿ. ಈ ರೈಲಿಗೆ ನಾಲ್ಕು ಕಿಟಕಿಗಳಿವೆ, ನಾಲ್ಕು ಜನರು ಅಲ್ಲಿ ನಿಂತುಕೊಳ್ಳಿ. ಈ ಸ್ಟೇಷನ್ನಿನಿಂದ ರೈಲು ಹೊರಡುವವರೆಗೂ ಯಾರೂ ಕದಲಬಾರದು.'' ಕುಮಾರನ ಬಾಯಿಂದ ಈ ಆಜ್ಞೆ ಹೊರ ಬಿತ್ತು. ಉಳಿದ ನಾಲ್ವರು ಸೈನಿಕ ಶಿಸ್ತಿನಂತೆ ಒಂದೇ ಬಾರಿಗೆ ಹೂ ಎಂದು ಹೇಳುತ್ತಾ ರೈಲಿನ ಕಿಟಕಿಗಳ ಮಧ್ಯೆ ತಲೆ ತೂರಿಸಿ ನಿಂತಿದ್ದರು.

ಬೇಸಗೆ ರಜ ಬಂದಿದ್ದರಿಂದ ಶಾಲೆಗಳಿಗೆ ಬಿಡವು. ಈ ಐವರು ಸ್ನೇಹಿತರು—ಕುಮಾರ, ಗೋಪಿ, ರಾಮು, ಮಾಧು ಮತ್ತು ಶಾಮು ತಮ್ಮ ಊರಿಗೆ ಹೊರಟಿದ್ದಾರೆ. ಐದು ಜನರೂ ಸೂಟ್ ಹಾಕಿ ದ್ದಾರೆ. ಕಾಮನ ಬಿಲ್ಲನ್ನು ನಾಚಿಸುವ ಬಣ್ಣ ಬಣ್ಣದ ಕಂಠ ಕೌಪೀ ನಗಳು ಅವರ ಕೊರಳಲ್ಲಿ ರಂಜಿಸುತ್ತಿವೆ. ಸಿಗರೇಟಿನ ಹೊಗೆ ಗಾಡಿ ಯನ್ನೆಲ್ಲಾ ಆವರಿಸಿದೆ. ಊರಿನಿಂದ ಹೊರಟ ಈ ಐವರು ಭೂಪರು ಇದೇ ವಿಧಾನವನ್ನು ಅನುಸರಿಸುತ್ತಾ ತಮ್ಮ ಗಾಡಿಯೊಳಕ್ಕೆ ಯಾರೂ ಬರದಂತೆ ನೋಡಿಕೊಂಡಿದ್ದಾರೆ.

ಇವರು ಮಾತನಾಡುತ್ತಿದ್ದ ಆಂಗ್ಲೋ ಕನ್ನಡವು ಅವರಿಗೇ ಪ್ರೀತಿ. ಅದು ಅವರಿಗೇ ಅರ್ಥವಾಗಬೇಕು. ಮಧ್ಯೆ, ಮಧ್ಯೆ "ಓಕೇ," "ಥೀರಿಯೋ" ಎಂಬ ಪದಗಳು ಅವರ ಬಾಯಿಂದ ಧಾರಾ ಕಾರವಾಗಿ ಹರಿಯುತ್ತಿದ್ದವು.

ಈ ಗುಂಪಿನ ನಾಯಕತ್ವವನ್ನು ಕುಮಾರ್ ವಹಿಸಿದ್ದ. "ಕುಮಾರ್ ಭೂಪ ಕಮಾಂಡರ್ ಆಗಿರಬೇಕಾದರೆ ಅದಾವನು

ಈ ಗಾಡಿಯೊಳಕ್ಕೆ ಬಂದಾನು? "ಕುಮಾರನೇ ಎದೆಯ ಮೇಲೆ ಕೈ ಇಕ್ಕಿ ಹೇಳಿದ. ಅವನ ಸಂಗಾತಿಗಳು "ಅಷ್ಟಲ್ಲದೇ"- ಎಂತ ದನಿ ಗೂಡಿಸಿದರು.

ಪ್ರತಿ ಸ್ಟೇಷನ್ನಿನಲ್ಲಿಯೂ ದೊರೆಯುವ ಕಡಲೆಕಾಯಿ, ಬಾಳೆ ಹಣ್ಣು, ಸೌತೆಕಾಯಿ, ಆಂಬೊಡೆ ಮುಂತಾದ ಎಲ್ಲ ತಿಂಡಿ ತಿನಸು ಗಳನ್ನೂ ಕೊಳ್ಳುತ್ತಿದ್ದರು. ಪ್ರತಿ ಸ್ಟೇಷನ್ನಿನಲ್ಲಿಯೂ ಕ್ಷುಲ್ಲಕ ವಿಚಾ ರಗಳಿಗೆ ಜಗಳವಾಡುತ್ತಿದ್ದರು. ಮಾತು ಮಾತಿಗೆ ಘೊಳ್ಳೆಂದು ನಗು ವರು. ಪಕ್ಕದ ಗಾಡಿಯಲ್ಲಿರುವವರು ಈ ಗಾಡಿಯಲ್ಲಿ ಐವತ್ತು ಜನ ಕ್ಕಿಂತಲೂ ಹೆಚ್ಚು ಜನರಿರಬೇಕೆಂದು ಊಹಿಸಿದ್ದರು.—ಅಷ್ಟಿತ್ತು ಅವರ ಗಲಾಟೆ.

ಈ ಜಂಕ್ಷನ್ ಸ್ಟೇಷನ್ನಿನಲ್ಲಿ ರೈಲು ಇಪ್ಪತ್ತು ನಿಮಿಷ ನಿಲ್ಲು ತ್ತದೆ—ನೀರು ತೆಗೆದುಕೊಳ್ಳುವದಕ್ಕಾಗಿ. ಗಾಡಿ ನಿಂತಕ್ಷಣವೇ ಜನರ ಗುಂಪೊಂದು ಕುಮಾರ್ ಮತ್ತು ಅವನ ಸ್ನೇಹಿತರಿರುವ ಗಾಡಿಗೆ ಬಂದಿತು. "ಒಳಗೆ ನಿಲ್ಲುವುದಕ್ಕೇ ಸ್ಥಳವಿಲ್ಲ. ಈ ಗಾಡಿಗೆ ನೀವೇಕೆ ಬರುತ್ತೀರಿ, ಬೇರೆ ಗಾಡಿಗೆ ಹೋಗಿ" ಐವರು ಮಿತ್ರರೂ ಒಕ್ಕೊರಲಿ ನಲ್ಲಿ ಅರಚಿದರು.

ಜನರು ಇವರ ಗಾಡಿ ಬಿಟ್ಟು ಬೇರೆ ಬೇರೆ ಗಾಡಿಗಳಿಗೆ ಹೋದರು. ಬಿಡಿ ಬಿಡಿಯಾಗಿ ಬಂದವರಿಗೆ ಸಹ ಈ ಗಾಡಿಯಲ್ಲಿ ಸ್ಥಳ ಸಿಕ್ಕಲಿಲ್ಲ. ಗಾಡಿ ಹೊರಡುವ ವೇಳೆಗೆ ಒಂದು ನರಪ್ರಾಣಿಯೂ ಈ ಸ್ನೇಹಿತರ ಕ್ಯಾರೇಜ್ ಹತ್ತಿರ ಸುಳಿಯಲಿಲ್ಲ. ಲೇಟೆಸ್ಟ್ ಸಿನಿಮಾ ಹಾಡುಗಳನ್ನು ಹೇಳುವವನೊಬ್ಬನಾದರೆ, ಅದನ್ನು ಶಿಳ್ಳೆಹಾಕುವ ನೊಬ್ಬ, ಇನ್ನೊಬ್ಬ ಗಾಡಿಗೆ ತಬಲ ಹೊಡೆಯುತ್ತಿದ್ದ, ಅಂತೂ ಒಟ್ಟಿ ನಲ್ಲಿ ಗುಲ್ಲೋಗುಲ್ಲು.

ಮೊದಲನೆಯ ಬೆಲ್ ಆಯಿತು. ಹಣ್ಣು ಹಣ್ಣು ಮುದುಕಿ ಯೊಬ್ಬಳು ಮತ್ತು ಅವಳ ಮೊಮ್ಮಗಳು ಅವಸರದಲ್ಲಿ ಓಡಿ ಬಂದರು. ಎಲ್ಲ ಕ್ಯಾರೇಜ್‌ಗಳೂ ಭರ್ತಿಯಾಗಿದ್ದರಿಂದ ಅವರಿಗೆ ದಿಕ್ಕು ತೋಚ

ದಾಯಿತು. ಮುಂದೇನು ಮಾಡಬೇಕೆಂದು ಆಲೋಚಿಸಲು ಅವರು ಒಂದು ಕ್ಯಾರೇಜ್ ಬಳಿ ಸ್ವಲ್ಪ ಹೊತ್ತು ನಿಂತರು. ಕುಮಾರನ ದೃಷ್ಟಿ ಈ ಜೊತೆಯ ಮೇಲೆ ಬಿದ್ದಿತು. ತಟ್ಟನೆ ಗಾಡಿಯ ಬಾಗಿಲು ತೆಗೆದು ಕೆಳಕ್ಕೆ ಹಾರಿದ. ಅವನ ಹಿಂದೆಯೇ ಅವನ ನಾಲ್ವರು ಗೆಳೆಯರೂ ಹಾರಿದರು.

"ಅಜ್ಜಮ್ಮಾ ನಿಮಗೆ ಎಲ್ಲೂ ಜಾಗ ಸಿಕ್ಕಲಿಲ್ಲವೇ ? ಬನ್ನಿ ನಮ್ಮ ಗಾಡಿಗೆ—ಖಾಲೀ ಗಾಡಿ" ಎಂದು ಹೇಳುತ್ತ ಅಜ್ಜಮ್ಮನ ಕಂಕುಳಲ್ಲಿದ್ದ ಹಾಸಿಗೆ ಸುರಳಿಯನ್ನು ಕುಮಾರ ತೆಗೆದುಕೊಂಡ.

ಮುದುಕಿಯನ್ನು ಪ್ರಶಸ್ತವಾದ ಜಾಗದಲ್ಲಿ ಕುಳ್ಳಿರಿಸಿದರು. ಮೊಮ್ಮಗಳು ಮುದುಕಿಯ ಪಕ್ಕದಲ್ಲಿ ಕುಳಿತಳು. ಹಾಸಿಗೆ ಮತ್ತು ಬುಟ್ಟಿ ಗಾಡಿಯ ಮೇಲ್ಭಾಗದಲ್ಲಿರುವ ನಾಗುವಂದಿಗೆ ಮೇಲಿಡಲಾಯಿತು.

ಐದು ಜೊತೆ ಕಣ್ಣುಗಳು ಹುಡುಗಿಯನ್ನೇ ನಟ್ಟ ದೃಷ್ಟಿಯಿಂದ ನೋಡುತ್ತಿದ್ದವು. ಅವಳಿಗೆ ಹದಿನಾರು ವರುಷವಿರಬಹುದು. ಗುಲಾಬಿ ಬಣ್ಣದ ಮೈಗೆ ಗುಲಾಬಿ ಬಣ್ಣದ ಸೀರೆ ಬಹು ಚೆನ್ನಾಗಿ ಒಪ್ಪುತ್ತಿತ್ತು. ನೀಟಾದ ಮೂಗು, ಅಗಲವಾದ ಕಣ್ಣುಗಳು, ಮಟ್ಟಸವಾದ ಮೈಕಟ್ಟು. "ಸುಂದರಿ" ಎಂದು ಹೇಳಿದರೆ ಯಾವ ಉತ್ಪ್ರೇಕ್ಷೆಯೂ ಆಗಲಾರದು.

"ನಾರಂಗಿ, ಆರಂಜಿ, ಕಿತ್ತಲೆಹಣ್ಣು" ಹುಡುಗನೊಬ್ಬ ಕೂಗಿದ.

ಕುಮಾರ ತಕ್ಷಣವೇ ಆ ಹುಡುಗನನ್ನು ಕರೆದು ಒಂದು ಡಜನ್ ಕಿತ್ತಲೆ ಹಣ್ಣು ತೆಗೆದುಕೊಂಡ. ತನ್ನ ಸ್ನೇಹಿತರಿಗೆಲ್ಲಾ ಒಂದೊಂದರಂತೆ ಕೊಟ್ಟು, ಉಳಿದೆಲ್ಲ ಹಣ್ಣುಗಳನ್ನೂ ಮುದುಕಿಯ ಪಕ್ಕಕ್ಕೆ ಸರಿಸಿ, 'ಅಜ್ಜಮ್ಮಾ ತೆಗೆದುಕೊಳ್ಳಿ' ಎಂದು ಕುಮಾರ್ ಹೇಳಿದ.

"ಅಪ್ಪಾ ನಿಮ್ಮ ಉಪಕಾರ ಎಷ್ಟು ಹೇಳಿದರೂ ತೀರದು. ಹೆಣ್ಣು ಹೆಂಗಸರು ನಾವು, ನೀವಿಲ್ಲದಿದ್ದರೆ ನಮಗೆ ರೈಲು ಸಿಕ್ಕು

ತ್ತಿತ್ತೋ ಇಲ್ಲವೋ ಹೇಳಲಾರೆ” ಮುದುಕಿ ತನ್ನ ಕೃತಜ್ಞತೆ ಹೇಳಿಕೊಂಡಳು.

“ಇದೇನು ಮಹಾ ಉಪಕಾರ ಅಜ್ಜಿ, ನೀವು ತೊಂದರೆ ಪಡುವುದನ್ನು ನೋಡಲಾರದೆ ಸ್ಥಳ ಕೊಟ್ಟೆವು. ಇನ್ಯಾರಾದರೂ ಬಂದಿದ್ದರೆ ಆ ಮಾತು ಬೇರೆ ಇತ್ತು’’ ಮಾಧು ಹೇಳಿದ. ನೀವು ಎಲ್ಲಿಯವರೆಗೆ ಹೋಗುವವರು ? ’’ ಕುಮಾರನ ಪ್ರಶ್ನೆ.

‘‘ಮೈಸೂರಿಗೆ” ಮುದುಕಿ ಹೇಳಿದಳು.

ರೈಲು ‘ಕೂ’ ಎಂದಿತು.

“ ಸುಶೀಲ ನನ್ನನ್ನು ಕಳಿಸೋಡಕ್ಕೆ ಬಂದೋಳು ರೈಲಿನಲ್ಲೇ ಕೂತರೆ ಹೇಗಮ್ಮ, ಜಾಗ್ರತೆ ಇಳಿ. ರೈಲು ಕೂಗಿತು” ಅಜ್ಜಿ ಮೊಮ್ಮಗಳಿಗೆ ಹೇಳಿದಳು.

‘‘ಹೋಗಿಬರ್ತೀಯಾ ಅಜ್ಜಿ, ಸುಖವಾಗಿ ಊರು ಮುಟ್ಟಿದ್ದಕ್ಕೆ ಕಾಗದ ಹಾಕಿಸು.’’ ಬೆಳ್ಳಿಯ ಕಿರುಗಂಟೆಗಳು ನಾಚುವ ದನಿಯಲ್ಲಿ ಹುಡುಗಿ ಮಾತನಾಡಿದಳು.

ಹುಡುಗಿ ಗಾಡಿಯಿಂದ ಕೆಳಕ್ಕಿಳಿಯುತ್ತಲೆ, ಐದು ಜನ ಸ್ನೇಹಿತರ ಮುಖಗಳೂ ಬಿಸಲಿನಲ್ಲಿ ಒಣಹಾಕಿದ ಮಲ್ಲಿಗೆ ಹೂವಿನಹಾಗೆ ಬತ್ತಿ ಬಾಡಿಹೋದವು.

———o———

# "ವಣ" ಮಹೋತ್ಸವ

ಹೆಚ್ಚು ಆಹಾರಕೊಡಿ, ರೇಷನ್ ಹೆಚ್ಚುಮಾಡಿ ಅಂತ ವನ್ನು ಕೇಳಿದರೆ "ಮರನೆಡಿ" ಆಹಾರ ಸಿಗುತ್ತೆ ಎಂತ ಹೇಳಿ, ಖಾಲಿ ನಿವೇಶನಗಳಲ್ಲೆಲ್ಲ ಮರಗಳನ್ನು ನೆಡಿಸಲಾರಂಭಿಸಿದ್ದಾರೆ. "ಎಲ್ಲಿಯೋ ಹೊಡೆದರೆ ದವಡೆ ಹಲ್ಲು ಉದುರಿತು" ಎಂಬಂತೆ, ಆಹಾರ ಕೇಳಿದರೆ ಮರ ನೆಡಲು ಹೇಳುವುದೇ ?

ಈಗ್ಗೆ ಸ್ವಲ್ಪ ದಿನಗಳ ಹಿಂದೆ ಈ ಮರ ನೆಡುವ ಪ್ರಚಾರ ಆರಂಭವಾದಾಗ, ಜನಗಳಿಗೆ ನೇಣುಹಾಕಿಕೊಳ್ಳಲು ಮರ ಸಾಲದೆ, ಹೊಸ ಮರಗಳನ್ನು ನೆಡಲು ಹೇಳುತ್ತಿದ್ದಾರೆಂದು ನಾನು ಊಹಿಸಿದೆ. ಈಚೆಗೆ ಈ ವಿಷಯವಾಗಿ ಕೊಂಚ ಅಭ್ಯಾಸ, ವ್ಯಾಸಂಗ ಮಾಡಿದ ಮೇಲೆ, ಮರಗಳು ಹೆಚ್ಚಾದಲ್ಲಿ ಮೋಡಗಳು ಆಕರ್ಷಿತವಾಗಿ, ಅವು ಮಳೆ ಹುಯ್ಯುತ್ತವೆ. ಮಳೆ ಹುಯ್ದರೆ ನದಿ, ಕೆರೆಕಟ್ಟೆಗಳೂ, ಹೊಲ ಗದ್ದೆಗಳೂ ತುಂಬುತ್ತವೆ. ಇದರಿಂದ ಹುಲುಸಾದ ಬೆಳೆ ಎಲ್ಲೆಲ್ಲೂ ಬೆಳೆಯುತ್ತದೆ. ಭೂವಿವರಣೆ ಮೊದಲನೆಯ ನಾಲ್ಕು ಪಾಠಗಳು ನಮ್ಮ ಮಂತ್ರಿಗಳಿಗೆ ಈ ಇಳಿವಯಸ್ಸಿನಲ್ಲಿ ನೆನಪಾದುದು ಆಧುನಿಕ ಪವಾಡಗಳಲ್ಲಿ ಒಂದಾಗಿದೆ.

"ನಿನ್ನ ಒಲುಮೆಯೊಂದಿದ್ದರೆ ಕೊರಡು ಕೊನರುವದಯ್ಯ" ಎಂಬುದಾಗಿ ಭಗವಾನ್ ಬಸವೇಶ್ವರರು ಒಂದೆಡೆ ದೇವರ ಮಹಿಮೆ ಯನ್ನು ಕೊಂಡಾಡಿದ್ದಾರೆ. ಈಗ ಮೊನ್ನೆತಾನೇ ನಡೆದ "ವನ ಮಹೋತ್ಸವ"ಗಳಿಗೆ ಬಂದ ಜನರು ಆಕರ್ಷಿತರಾಗಲು ಮತ್ತು ಮೆಚ್ಚಲು ಎಲ್ಲಿಂದಲೋ-ಹುಲುಸಾಗಿ ಬೆಳೆದಿದ್ದ—ಮರಗಳನ್ನು ಕಡಿದು ತಂದು ಮರ ನೆಡುವ ಉತ್ಸವವನ್ನು ಸಾಂಗಗೊಳಿಸಿದಾ

ಯಿತು. ಈ ಕೊರಡುಗಳು ಮತ್ತು ಒನಕೆಗಳು ಭಗವಂತನ ಒಲುಮೆಯಿಂದ ಚಿಗುರಬೇಕಲ್ಲದೆ ಬೇರೆ ಯಾವ ಕಾರಣದಿಂದಲೂ ಚಿಗುರಲು ಸಾಧ್ಯವಿಲ್ಲ. ಹೂವಿನ ಹಾರ, ಚಪ್ಪಾಳೆಗಳ ಮಧ್ಯ ನೆಟ್ಟ ಈ "ಕೊರಡು"ಗಳು ಮಂತ್ರಿಗಳು ಕಾರಿನಲ್ಲಿ ಮನೆ ತಲ್ಪುವದರೊಳಗೆ ಒಣಗಿ ಹೋಗಿರುತ್ತವೆ. ಈ ಮರ ನೆಡುವ ಉತ್ಸವದಿಂದ ಆದ ಲಾಭವೇನೆಂದರೆ ಇದ್ದ ಮರಗಳು ಕಡಿದು ಹಾಕಲ್ಪಟ್ಟವು ಮತ್ತು ಹೊಸ ಮರಗಳು ಹುಟ್ಟಲಿಲ್ಲ.

ಮರ ನೆಡುವ ಈ ನೂತನ ಚಳುವಳಿಯನ್ನು ಆರಂಭಿಸಿದ ಕೇಂದ್ರ ಸರ್ಕಾರದ ಆಹಾರ ಮಂತ್ರಿ ಶ್ರೀ ಕನ್ನಯಲಾಲ್ ಮುನ್ಷಿಯವರು ಬಹಳ ಚತುರ ಬುದ್ಧಿಯವರೆಂದು ನಾವು ಹೇಳಬಹುದು. ಈಗ ನೆಟ್ಟಿರುವ ಮರಗಳು ದೊಡ್ಡವಾಗಿ, ಅವು ಮೋಡಗಳನ್ನು ಆಕರ್ಷಿಸಿ ಮಳೆ ಬರುವವರೆಗೆ ನಾವು ಹೆಚ್ಚು ಆಹಾರ ಕೊಡಿ ಎಂದು ಅವರನ್ನು ಒತ್ತಾಯಗೊಳಿಸುವ ಹಾಗಿಲ್ಲ. ಒಂದುವೇಳೆ ಈಗ ನೆಟ್ಟಿರುವ ಮರಗಳು ಹೇಗೋ ಬೆಳೆಯುತ್ತವೆಂದು ಭಾವಿಸೋಣ. ಇದು ಸಾಧಿತವಾಗಲೂ ಹೇಗೂ ಇಪ್ಪತ್ತು ಮೂವತ್ತು ವರ್ಷಗಳು ಬೇಕು-ನೋಡೋಣ ಅಲ್ಲಿಯವರೆಗೆ, ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು.

ಸರ್ಕಾರದವರು ಇಂಥ ಕೆಲವು ಅವಿವೇಕ ಯೋಜನೆಗಳನ್ನು ಜಾರಿಗೆ ತಂದಿದ್ದು ಸಾರ್ವಜನಿಕರಿಗೆ ಗೊತ್ತೇ ಇದೆ. ರೈಲುಗಾಡಿಗಳಲ್ಲಿ ಸ್ಥಳ ಇಲ್ಲದಿದ್ದಾಗ, ಜನರು ಪ್ರಯಾಣ ಮಾಡಬಾರದೆಂಬ ಪ್ರಚಾರ ನಡೆಸಲಾರಂಭಿಸಿದರು. ಅದಾದ ಮೇಲೆ ಬರೆಯಲು ಕಾಗದವಿಲ್ಲದಾಗ "ಕಾಗದ ಕಡಿಮೆ ಬಳಸಿ" (Useless Papers) ಎಂಬ ಪ್ರಚಾರ ಆರಂಭಿಸಿದರು. ಇದಾದ ಮೇಲೆ ಹೆಚ್ಚು "ಆಹಾರ ಬೆಳೆಯಿರಿ" ಪ್ರಚಾರ ನಡೆಸಿದರು. ಇವುಗಳ ಪ್ರಚಾರಕ್ಕೆ ಕೋಟ್ಯಾಂತರ ರೂಪಾಯಿಗಳ ವೆಚ್ಚವಾಯಿತೆನ್ನುವ ಮಾತು ಸತ್ಯವಾದರೂ, ಅದರಿಂದ ಒಂದು ಚಿಕ್ಕಾಸು ಪ್ರಯೋಜನವಾಗಲಿಲ್ಲವೆನ್ನುವುದು ಅದ

ಕ್ಕಿಂತಲೂ ಹಿರಿಯ ಸತ್ಯವಾಗಿದೆ. ಹೆಚ್ಚು ಆಹಾರವನ್ನು ಭೂಮಿಯ ಮೇಲೆ ಬೆಳೆಯದೆ ಕಾಗದದ ಮೇಲೆ ಬೆಳೆಯುತ್ತಾರೆಯೇ ?

ಪ್ರಧಾನಿ ಪಂಡಿತ ಜವಹರಲಾಲ್ ನೆಹರೂರವರು ಮತ್ತು ರಾಷ್ಟ್ರಾಧ್ಯಕ್ಷ ಬಾಬುರಾಜೇಂದ್ರಪ್ರಸಾದರು ರಾಜಘಾಟಿನಲ್ಲಿ ಎರಡು ತುಳಸಿ ಸಸಿಗಳನ್ನು ನೆಟ್ಟರು. ಈ ಸುದ್ದಿಯನ್ನೋದಿದಮೇಲೆ ನಾನು ಸಹ ನಮ್ಮ ಮನೆಯಮುಂದೆ ಎರಡು ತುಳಸಿ ಸಸಿಗಳನ್ನು ನೆಟ್ಟಿದ್ದೇನೆ. ಹೆಚ್ಚು ಆಹಾರ ಬೆಳೆಯುವ ಯೋಜನೆಗೆ ನನ್ನಿಂದಲೂ ಅಲ್ಪ ಕಾಣಿಕೆ ಸಲ್ಲಿಸಿದಂತಾಯಿತು. ನನ್ನ ಆತ್ಮ ವಿಶ್ವಾಸ ಇಲ್ಲಿಗೇ ಮುಗಿಯಲಿಲ್ಲ. ಈ ತುಳಸೀ ಸಸಿಗಳಿಗೆ ಮೊಡಗಳು ಆಕರ್ಷಿತವಾಗಿ ಮಳೆ ಯಥೇಷ್ಟವಾಗಿ ಸುರಿದೀತೆಂದು, ಮನೆಗೆ ಹೊಸದಾಗಿ ಹೆಂಚು ಹೊದೆಸಿ ಗವಾಕ್ಷಿಗಳನ್ನೆಲ್ಲ ಮುಚ್ಚಿಸಿದ್ದೇನೆ. ಈಗಲೀಗ ಇನ್ನೊಂದು ಯೋಚನೆ ಹೊಳೆಯಿತು. ಮನೆಯಲ್ಲಿ ರೇಷನ್ ಸಾಲದಿದ್ದರೆ ತುಳಸಿ ಸೊಪ್ಪಿನ ರಸ ಕುಡಿದು "ರಾಮಾ" ಅಂತ ಮಲಗಿಬಿಡೋದು.

ಇತಿಹಾಸ ಪ್ರಸಿದ್ಧನಾದ ಮಹಮದ್ ಬಿನ್ ತೊಗಲಖನು ದೆಹಲಿ ರಾಜಧಾನಿಯನ್ನು ದೇವಗಿರಿಗೆ ಬದಲಾಯಿಸಲು ಪ್ರಯತ್ನಿಸಿದ್ದು, ಮಂಗೋಲಿಯಾ ಆಕ್ರಮಿಸಲು ಸೇನೆ ಕಳಿಸಿದ್ದು ಮುಂತಾದ ಹುಚ್ಚು ಹುಚ್ಚು ಕೆಲಸಗಳನ್ನು ಮಾಡಿದನೆಂದು ಓದಿದ್ದೇವೆ. ಅವನ್ನೋದಿದಾಗ ಹೊಟ್ಟೆತುಂಬ ನಕ್ಕಿದ್ದೇವೆ. ಆದರೆ ಈ ಹುಚ್ಚು ಕತೆಗಳು ನಾಚುವಂತಹ ಘಟನೆಗಳು ನಮ್ಮ ಕಣ್ಣೆದುರಿಗೇ ನಡೆಯುತ್ತಿವೆ. ತೊಗಲಖನನ್ನು ಮೀರಿಸುವ ಆಡಳಿತ ವೈಖರಿಯು ದಿನದಿನವೂ ನಡೆಯುತ್ತಿದೆ. ಅದರಲ್ಲಿ ಈ "ವನಮಹೋತ್ಸವ" ಒಂದು. ಇದ್ದ ಮರಗಳನ್ನು ಕಾಪಾಡುವ ಯೋಗ್ಯತೆ ಇಲ್ಲದಿರುವಾಗ ಹೊಸಮರಗಳನ್ನು ನೆಡುವ ಹಂಬಲ ಏತಕ್ಕೆ ?

ಪಿ. ಸೂ. ನಿಮಿಷಾರ್ಧದಲ್ಲಿ ಹಾವಾಡಿಗನು ಮಾವಿನ ಗಿಡಗಳನ್ನು ತಯಾರು ಮಾಡುವದನ್ನು ನಾವು ನೋಡಿದ್ದೇವೆ. ಸರ್ಕಾರದವರು ಇಂಥ ಹಾವಾಡಿಗರನ್ನೆಲ್ಲ ನಿರ್ಬಂಧಸೇವೆಗೆ (Conscription) ತೆಗೆದುಕೊಂಡು ಅವರಿಂದ ಮಾವಿನ ಗಿಡಗಳನ್ನು ತಯಾರಿಸಿದರೆ ಬಹಳ ಅನುಕೂಲವೆಂದು ಸೂಚನೆ ಕೊಡ ಬಯಸುತ್ತೇನೆ.

# ಬೋರ್ಡ್ ಬರಹ

'ಕೊರವಂಜಿ'ಯ ಒಂದು ಸಂಚಿಕೆಯಲ್ಲಿ "ಅಕ್ಷರಸ್ತ" ಎಂಬ ಹಾಸ್ಯ ಬರಹವನ್ನು ಓದಿ ಸ್ಫೂರ್ತಿಗೊಂಡು ಈ ಲೇಖನ ಬರೆದಿದ್ದೇನೆ. ನಮ್ಮ ಹಳೆಯ ಕವಿಗಳು ಮೊದಲು ಗಣಪತಿಗೂ ಸರಸ್ವತಿಗೂ ಪ್ರಾರ್ಥಿಸಿ ಋಣ ತೀರಿಸುವಂತೆ, ಆ ಲೇಖಕರಿಗೆ ಋಣ ತೀರಿಸಿ ನನ್ನೀ ಲೇಖನವನ್ನು ಆರಂಭಿಸುತ್ತೇನೆ.

ಬೋರ್ಡ್‌ಗಳನ್ನು ಬರೆಯಿಸುವವರು ಸಾಮಾನ್ಯವಾಗಿ ಯಾವ ನೀತಿ ನಿಯಮಗಳನ್ನೂ ಅನುಸರಿಸುವದಿಲ್ಲ. ಇವುಗಳಲ್ಲಿ ಬಹಳವಾಗಿ ಅಪಭ್ರಂಶವಾಗಿರುವವೆಂದರೆ ಮಹಾರಾಷ್ಟ್ರ ಮಿಲಿಟರಿ ಹೋಟಲಿನವು. ಇವು ಯಾವರೀತಿ ಮಾರ್ಪಾಡು ಹೊಂದಿರುತ್ತವೆಂದರೆ "ಮಿಟ್ಲೇರಿ ಹೋಟಲ್" "ಮಿಲ್‌ಟರಿ ಹೋಟಲ್" ಮಿಲಿಟರಿ ಓಟ್ಲುಮನೆ ಇತ್ಯಾದಿ. ಇದರಲ್ಲಿರುವ "ಮಹಾರಾಷ್ಟ್ರ"ವಂತೂ ಏನೇನೋ ಅಧ್ವಾನವಾಗಿರುತ್ತೆ. ಮೊನ್ನೆ ಈ ಮಿಲಿಟರಿ ಹೋಟಲಿನ ಇಂಗ್ಲೀಷ್ ಬೋರ್ಡ್ ಒಂದನ್ನು ನೋಡಿದೆ. "Miltory Hotal" ಮಿಲಿಟರಿಯವರ ಭಾಷೆಯನ್ನು ಸ್ಪರ್ಧಿಸಿ ಈ ಬೋರ್ಡ್‌ಗಳನ್ನು ಬರೆದಿದ್ದಾರೆಂದು ತರ್ಕಿಸಿದೆ.

ಆಯುಷ್ಕರ್ಮ ಶಾಲೆಗಳಿಗೆ ಅಂಟಿಸಿರುವ ಬೋರ್ಡ್‌ಗಳೂ ಹೀಗೆಯೇ ಇನ್ನೂ ಅಧ್ವಾನವಾಗಿರುತ್ತವೆ. "ಶೇವಿಂಗ್ ಸಿಲೋನ್" ಎಂತ ಮೊನ್ನೆ ಒಂದು ಬೋರ್ಡ್ ಓದಿದೆ. ಈಗಿನ ಯುದ್ಧ ಪರಿಸ್ಥಿ

ತಿಯಲ್ಲಿ ಸಿಲೋನ್ ದೇಶವು ಬಹಳ ಆಯಕಟ್ಟಿನ ಸ್ಥಳದಲ್ಲಿರುವುದರಿಂದ ಅದನ್ನು ಹೇಗಾದರೂ ರಕ್ಷಿಸಲು ಒಂದು ಸಂಸ್ಥೆಯನ್ನೇನಾದರೂ ಸ್ಥಾಪಿಸಬಹುದೆಂದು ನಾನು ಗ್ರಹಿಸಿದೆ. ಆದರೆ ನವುರಾದ ತೆರೆಯ ಮೇಲ್ಗಡೆ "Well-come" ಎಂಬ ಚಿಕ್ಕ ಬೋರ್ಡ್, ಒಳಗಡೆ ಕತ್ತರಿ ಪ್ರಯೋಗದ ಕೆಲಸವು ಚುರುಕಿನಿಂದ ಸಾಗಿರುವುದನ್ನು ನೋಡಿ ಇದೊಂದು ಆಯುಷ್ಕರ್ಮಶಾಲೆಯೆಂದು ತಿಳಿದುಕೊಂಡೆ. ಈ ಕ್ಷೌರಿಕಾಲಯುಗಳ ಬೋರ್ಡ್‌ಗಳ ಬಗ್ಗೆ ನನಗೆ ಒಂದು ಸಂದೇಹವು ಮಾತ್ರ ಇಂದಿಗೂ ನಿವೃತ್ತಿಯಾಗಿಲ್ಲ. ಏನೆಂದರೆ "ಲಕ್ಷ್ಮಿ ಹೇರ್ ಕಟಿಂಗ್ ಸೆಲೂನ್" ಇದರ ವ್ಯಾಕ್ಯಾರ್ಥ ಮಾಡುವ ಗೋಜಿಗೆ ನಾನು ಹೋಗುವದಿಲ್ಲ. ಇಡೀ ವಾರವೆಲ್ಲ ಕೂತುಕೊಂಡು, "ಪ್ರಜಾಮತ" ನನ್ನ ಕೈಲಿಟ್ಟು "ಇದನ್ನು ಓದಿ ಮುಗಿಸಿ, ಅಷ್ಟುಹೊತ್ತಿಗೆ ಕರೆಯುತ್ತೇನೆ" ಎಂದು ಹೇಳುತ್ತಾನೆ. ಈ ಕಾರಣದಿಂದ ಈ ಸೆಲೂನುಗಳವರು "ತಿರುಪತಿ ಹೇರ್ ಕಟಿಂಗ್ ಸೆಲೂನ್" ಅಂತ ನಾಮಕರಣ ಮಾಡಿಕೊಂಡರೆ ಚೆನ್ನಾಗಿರುತ್ತದೆ.

ಇನ್ನು ಮೋಟಾರ್ ಸರ್ವೀಸ್‌ಗಳ ಮೇಲಿರುವ ಬೋರ್ಡುಗಳನ್ನು ನೋಡೋಣ. ಕೆಲವು ಮೋಟಾರು ಸರ್ವೀಸ್‌ಗಳ ಮೇಲೆ ಎಂ. ಎಂ. ಟಿ. ಎನ್. ಕೆ. ಎಂ. ಎಸ್. ಎಂತ ಬರೆದಿರುತ್ತಾರೆ. ಕೊನೆಯ ಎರಡಕ್ಷರಗಳಾದ ಎಂ. ಎಸ್. ಅಂದರೆ ಮೋಟಾರ್ ಸರ್ವೀಸ್ ಅಂತ ಅರ್ಥಮಾಡಬಹುದು. ಆದರೆ ಉಳಿದ ಅಕ್ಷರಗಳು ಬರೆಯಿಸಿದಾತನಿಗಾದರೂ ತಿಳಿದಿದೆಯೋ ಇಲ್ಲವೋ ಅನುಮಾನ.

ನಾಟಿಕೋಟಿ ಚೆಟ್ಟಿಯಾರರು ಸಹ ಬಹು ಉದ್ದವಾದ ಹೆಸರುಗಳನ್ನು ಇಟ್ಟುಕೊಂಡಿರುತ್ತಾರೆ. ಕೆ. ಎನ್. ಬಿ. ಪಿ. ಟಿ. ಎಚ್. ಎನ್. ಡಿ. ಚೆಟ್ಟಿಯಾರ್ ಇಷ್ಟು ದೊಡ್ಡ ಹೆಸರನ್ನೇಕೆ ಇಟ್ಟುಕೊಂಡಿದ್ದಾನೆಂದು ಹೇಳುವರಾರು ?

ಹೋಟಲ್ ಬೋರ್ಡ್‌ಗಳ ಅಧ್ವಾನವನ್ನಿಷ್ಟು ನೋಡೋಣ. ಉತ್ತರ ಕರ್ನಾಟಕದ ಒಂದೂರಿನಲ್ಲಿ ಒಂದು ಹೋಟಲಿನ ಮುಂದೆ ಒಂದು ಬೋರ್ಡ್ ನೇತಾಡುತ್ತಿತ್ತು. ಅದು ಹೇಗಿತ್ತೆಂದರೆ:—

ಸುಚಿ ಬರ್‍ರಿ ! ರುಚಿ ಕೂಡ್ರಿ !!

ಓನಮಃ ಶಿವಾಯ

**ಬಡವರ ಕಾಮದೇನು**

**ಬಿಲ್ಲಿಗೆ ಖಾರ ಬಿಲ್ಲಿಗೆ ಚಹ**

ಇಲ್ಲಿ ಬೊಂಬಾಯಿ ನಮೂನೆ ಊಟ ಸಿಗುತ್ತದೆ.

ಈ ಹೋಟಲಿನ ಭಕ್ರಿಗಳು ಬೊಂಬಾಯಿಯಷ್ಟು ದೊಡ್ಡದಾಗಿರುತ್ತವೋ, ಅಥವಾ ಬೊಂಬಾಯಿ ಸೀಮೆಯ ಊಟ ದೊರೆಯುತ್ತದೋ ಹೇಳಲಾರೆವು.

ನಮ್ಮೂರಿನ ಒಂದು ಹೋಟೆಲ್‌ನ ಬೋರ್ಡನ್ನು ನಾನು ದಿನವೂ ನೋಡಿದ್ದರೂ ಅದರ ಅರ್ಥವೇ ನನಗಾಗಿರಲಿಲ್ಲ. ಹೋಟಲಿನ ಮಾಲಕನೇ ಬಿಡಿಸಿ ಹೇಳಿದ ಮೇಲೆ ತಿಳಿಯಿತು. ಆ ಬೋರ್ಡ್ ಬರಹ ಹೀಗಿತ್ತು.

**ಬ್ರಾಹ್ಮಣರ ಹೋಟಲ್ ಮತ್ತು**

**ಕಾಫೀ ಕ್ಲಬ್**

ಪ್ರೊ॥ **ಹೋಟಲ್‌ಕೀ ಪರಕೆ ಸುಬ್ಬಣ್ಣ**

ಪರಕೆ ಸುಬ್ಬಣ್ಣಾ ಬಂದವರನ್ನೆಲ್ಲಾ ಚೆನ್ನಾಗಿ ಕಸ ಹೊಡೆದು, ಇದ್ದು ಬದ್ದುದನ್ನೆಲ್ಲಾ ಗುಡಿಸಿಕೊಂಡು ಹೋಗುತ್ತಾನೇನೋ ಅಂತ ಮಾಡಿದ್ದೆ. ಆದರೆ ಹೋಟಲ್ ಕೀಪರ್ ಸುಬ್ಬಣ್ಣಾ ಅಂತ ಅವನೇ ಬಿಡಿಸಿ ಹೇಳಿದಮೇಲೆ ನನಗೂ ಅರ್ಥವಾಯಿತು.

ನಮ್ಮ ಪಕ್ಕದ ಊರಿನಲ್ಲಿ ಒಬ್ಬ ಶೆಟ್ಟಿಯು ಒಂದು ಬೆಳ್ಳಿ ಬಂಗಾರದ ಅಂಗಡಿಯನ್ನಿಟ್ಟುಕೊಂಡಿದ್ದ. ಶೆಟ್ಟಿಯ ಅಜ್ಜ ಅಂಗಡಿಯನ್ನು ಸ್ಥಾಪಿಸಿದಾಗ ಒಂದು ಬೋರ್ಡ್ ಬರೆಸಿದ್ದ. ಅದು ಹೇಗಿತ್ತೆಂದರೆ;—

**ಸರ್ಫ ಏಕಣಣ ಮಂಗ ಸುಂಬಣ್ಣನ ಸರ್ಫ ಅಂಗಡಿ.**

ಡಿಂಡಿಮ ಕವಿಯ ಸಮಸ್ಯೆಯಾದರೂ ಕೊಂಚ ಸುಲಭವಾಗಿರಬಹುದು ಶೆಟ್ಟಿಯ ಅಂಗಡಿ ಬೋರ್ಡ್ ಬರಹವು ನನ್ನ ತಲೆ ಕೆಡಿಸಿತು. ಒಂದು ದಿನ ಶೆಟ್ಟಿಯನ್ನೇ ದೈನ್ಯದಿಂದ ಕೇಳಿಕೊಂಡೆ. ಶೆಟ್ಟಿ ವಿವರಿಸಿ ಹೇಳಿದ, "ಸ್ವಾಮೀ, ನೀವು ಕಲಿತವರು ಈ ಬೋರ್ಡಿನ ಅಕ್ಷರಗಳು ನಿಮಗೆ ತಿಳಿಯಲಿಲ್ಲವೇ ?" ಎಂದ "ಅಯ್ಯ, ಅಕ್ಷರಗಳೆಲ್ಲಾ ತಿಳಿದವು. ಆದರೆ ಅರ್ಥಮಾತ್ರ ಆಗಲಿಲ್ಲ" ಎಂದೆ. ಅವನು ಸ್ವಾಕಿನಲ್ಲಿಟ್ಟಿದ್ದ ಗಂಭೀರವನ್ನು ಕೊಂಚ ಹೊರಕ್ಕೆ ತೆಗೆದು "ಆ ಬೋರ್ಡಿನ ಅರ್ಥ ಹೀಗೆ. 'ಸರಾಫ್ ವೆಂಕಣ್ಣನ ಮಗ ಸುಬ್ಬಣ್ಣನ ಸರಾಫ್ ಅಂಗಡಿ,". ನಾನು ಅಷ್ಟು ಅರ್ಥ ಮಾಡಲಾರದೆ ಹೋದೆನಲ್ಲಾ ಎಂದು ಮರುಗುತ್ತ ಮನೆಕಡೆ ದಾರಿ ಹಿಡಿದೆ.

ಒಂದುಸಾರಿ ಶಿವಮೊಗ್ಗಾದಲ್ಲಿ ಒಂದು ಬೋರ್ಡ್ ನೋಡಿದೆ. "ಎಕಂಪೈನ ಪ್ರಿಟಿಂಗ್ ಪ್ರೆನ್ ಶಿಮವಗ್ಗ" ಇದೇನು ಅಂತಹ ಕಠಿಣ ಬರಹವಲ್ಲ. ವೆಂಕಪ್ಪಯ್ಯನ ಪ್ರಿಂಟಿಂಗ್ ಪ್ರೆಸ್ ಶಿವಮೊಗ್ಗ ಅಂತ ಯಾರಾದರೂ ಅರ್ಥಮಾಡಬಹುದು.

ಹುಬ್ಬಳ್ಳಿಯಲ್ಲಿ "ಸಾಹಿತ್ಯ ಸಂಗ್ರಹ ಟೀ ಕ್ಲಬ್" ಎಂತ ಒಂದು ಬೋರ್ಡ್ ನೋಡಿದ್ದೆ. ಹೊಟ್ಟೆಗಿಲ್ಲದ ಸಾಹಿತಿಗಳು ತಮ್ಮ ಸಾಹಿತ್ಯದ ಸರಕುಗಳನ್ನು ಗಿರವಿ ಇಟ್ಟು 'ಇಲ್ಲಿ ಟೀ ಕುಡಿಯುತ್ತಿದ್ದರೆಂದು ನಾವು ಅರ್ಥಮಾಡಬಹುದೆ?

ಮೇಲೆ ಹೇಳಿದುದೆಲ್ಲ ಅಧ್ವಾನವಾಗಿರುವ ಬೋರ್ಡ್‌ಗಳ ಬಗ್ಗೆ ಬರೆದಿದ್ದಾಯಿತು. ನನ್ನ ಅಭಿಪ್ರಾಯದಲ್ಲಿ ಬೋರ್ಡ್‌ಗಳು,

ಅಂಗಡಿಗಳಲ್ಲಿ ದೊರೆಯುವ ಸಾಮಾನು ಅಥವಾ ಸೇವೆಯ ಗುಣವನ್ನು ಸೂಕ್ಷ್ಮವಾಗಿ ಸಾಂಕೇತಿಕವಾಗಿ ತಿಳಿಸುವಂತಿರಬೇಕು. ಉದಾಹರಣೆಗಾಗಿ ಈ ಕೆಲವನ್ನು ನೋಡಿ, "ಆಂಜನೇಯ ಲಾರಿ ಸರ್ವೀಸ್'' ಅಂತ ಹೆಸರಿಟ್ಟರೆ, ಆಂಜನೇಯನು ಚಂದ್ರದ್ರೋಣ ಪರ್ವತವನ್ನೆತ್ತಿ ತಂದಿಟ್ಟಂತೆ, ಈ ಲಾರಿಯು ಸಹ ಸಾಮಾನುಗಳನ್ನು ಸಾಗಿಸುವುದೆಂದು ಅರ್ಥಮಾಡಬಹುದು. ಇದರಂತೆ ವ್ಯಾಯಾಮ ಶಾಲೆಯವರು "ಭೀಮಕೃಪಾ ವ್ಯಾಯಾಮಶಾಲೆ" ಇದರಂತೆ ಬೊಜ್ಜು ಕರಗಿಸುವ ಸಂಸ್ಥೆಯವರು "ಸುಧಾಮ ಸ್ಲಿಮಿಂಗ್ ಇನ್‌ಸ್ಟಿಟ್ಯೂಟ್" ಬೀಡಿ ಕಂಪೆನಿಯವರು "ಭಸ್ಮಾಸುರ ಬೀಡೀ" ಬೆಂಕಿ ಪೊಟ್ಟಣದವರು "ಜಮದಗ್ನಿ ಮ್ಯಾಚಸ್" ಮತ್ತು ವಿಮಾನಕಂಪೆನಿಗಳವರು "ಜಟಾಯು ಏರ್‌ವೇಸ್" ಷೇವಿಂಗ್ ಸೆಲೂನುಗಳವರು, "ತಿರುಪತಿ ಹೇರ್ ಕಟಿಂಗ್ ಸೆಲೂನ್" ಎಂತ ಹೆಸರುಗಳನ್ನಿಡಬಹುದು.

ಇನ್ನು ಕೆಲವು ವಿಚಿತ್ರ ಬೋರ್ಡ್‌ಗಳ ಬರವಣಿಗೆಯನ್ನು ಕೊರೆದು, ಈ ಅಸಂಬದ್ಧ ಪ್ರಲಾಪವನ್ನು ಸಾಕುಮಾಡುತ್ತೇನೆ.

"ಹಾಸ್ಪಿಟಲ್ ಫಾರ್ ಫೌಂಟೇನ್‌ಪೆನ್ಸ್ ಡಾಕ್ಟರ್........"
"ಹಾಸ್ಪಿಟಲ್ ಫಾರ್ ಬ್ರೋಕನ್ ಅಂಬ್ರೆಲಾಸ್"........ಸಾಕು!

— o —

# ಕಮಲೂನ ರೇಡಿಯೋ ಪ್ರೋಗ್ರಾಂ

ಹಿರಿಯಣ್ಣಯ್ಯನವರು ಶಿಂಬೆ ಗುಮಾಸ್ತರು. ತಮಗೆ ಬರುತ್ತಿದ್ದ ಅಲ್ಪ ಸಂಬಳದಲ್ಲಿ ಚಾಮುಂಡಿ ಬಡಾವಣೆಯಲ್ಲಿ ಒಂದು ಚಿಕ್ಕ ಮನೆ ಮಾಡಿದ್ದರು. ಹೆಂಡತಿಯ ಕಾಟಕ್ಕೆ ಮಗಳಿಗೆ ಪಿಟೀಲು ಪಾಠ ಹೇಳಿಸುತ್ತಿದ್ದರು.

ಹಿರಿಯಣ್ಣಯ್ಯನವರಿಗೆ ಸಂಗೀತದಲ್ಲಿ ಅಭಿರುಚಿ ಇರಲಿಲ್ಲ. ಇದ್ದರೂ ಅದಕ್ಕೆ ಪುರುಸೊತ್ತೂ ಇರಲಿಲ್ಲ. ದಿನವಿಡೀ ಆಫೀಸಿನ ಕೆಲಸ; ಮನೆಗೆ ರಾತ್ರಿ ಎಂಟುಗಂಟೆಗೆ ಬಂದು ಊಟಮಾಡಿ ಒಂಭತ್ತು ಗಂಟೆಗೆ ಮಲಗಿದರೆ ಅಂದಿನ ದಿನಚರಿ ಮುಗಿದಹಾಗಾಯಿತು. ಇನ್ನು ಕಮಲೂ ಪಿಟೀಲು ಪಾಠ ಎಷ್ಟು ಕಲಿತಿದ್ದಾಳೆ, ಅವಳು ಅದರಲ್ಲಿ ಮುಂದಕ್ಕೆ ಬರಬಹುದೇ ಮುಂತಾದ ವಿಚಾರಗಳನ್ನು ಅವರು ಯೋಚಿಸುವ ಹಾಗೆಯೇ ಇರಲಿಲ್ಲ. ಅವರ ಹೆಂಡತಿ ಜಾನಕಮ್ಮ ನವರ ಬಿಟ್ಟು ಬಿಡದ ಕಾಟದಿಂದ ಕಮಲೂ ಸ್ಕೂಲು ಪಾಠಗಳನ್ನು ಸಹ ಬದಿಗೊತ್ತಿ ಪಿಟೀಲು ಕೊರೆಯುವುದರಲ್ಲಿಯೇ ನಿರತಳಾಗಿದ್ದಳು. ಹಿರಿಯಣ್ಣಯ್ಯ ದಿನವೂ ಆಫೀಸಿನ ವೇಳೆಗಿಂತ ಮುಂಚಿತವಾಗಿಯೇ ಮನೆ ಬಿಟ್ಟು ಹೊರಡಲು ಕಮಲೂನ ಪಿಟೀಲು ಪಾಠವೂ ಕಾರಣ ವಾಗಿತ್ತು. ಕಮಲೂ ಎಂದು ಪಾಠ ಆರಂಭಿಸಿದಳೋ ಅಂದಿನಿಂದ ನೆರೆಹೊರೆಯವರು ಜಾನಕಮ್ಮನ ಜೊತೆ ಜಗಳವಾಡಿದರು. ಬೆಳಗಿನ ಜಾವ ಮಕ್ಕಳು ಎದ್ದು ಕುಳಿತುಕೊಳ್ಳುತ್ತವೆ, ಮಧ್ಯಾಹ್ನ ತಮಗೆ ನಿದ್ದೆಯಿಲ್ಲ. ಇಂಟರ್ ಮೀಡಿಯೆಟ್ ಪರೀಕ್ಷೆ ಕಟ್ಟಿದ್ದ ಇಬ್ಬರು ಹುಡುಗರು ಫೇಲಾದರು, ಮುಂತಾದ ಕಾರಣಗಳನ್ನು ಅವರು

ಮುಂದೊಡ್ಡಿದ್ದರು. ಜಾನಕಮ್ಮನ ಬಾಯಿಗೆ ಹೆದರದ ಜನ ಇರಲಿಲ್ಲ. ಎಲ್ಲರನ್ನೂ ದಬಾಯಿಸಿದರು. ತಮ್ಮ ಮುದ್ದು ಹುಡುಗಿ ಪಿಟೀಲು ಕಲಿತರೆ ಇತರರಿಗೆ ಹೊಟ್ಟೆಕಿಚ್ಚು ಎಂದು ಕೂಗಾಡಿದರು. ನಿಜಕ್ಕೂ ಕಮಲು ಪಿಟೀಲನ್ನು ಸ್ವಲ್ಪ ಚೆನ್ನಾಗಿಯೇ ನುಡಿಸುತ್ತಿದ್ದಳು. ಸತತ ಅಭ್ಯಾಸದಿಂದ ಕೈ ಪಳಗುತ್ತ ಬಂದಿತ್ತು. ಜಾನಕಮ್ಮನವರಿಗೆ ಒಂದು ಆಸೆ ಅವರ ತಲೆಯಲ್ಲಿ ಸದಾ ಮೊಲಕು ಹಾಕುತ್ತಿತ್ತು. ಕಮಲೂ ರೇಡಿಯೋದಲ್ಲಿ ಒಂದು ಬಾರಿ ಪಿಟೀಲು ನುಡಿಸಬೇಕೆಂದು ಅವರು ಅವರಿವರನ್ನು ಹಿಡಿದು ಕಮಲೂನಿಂದ ಆಡಿಷನ್ ಕೊಡಿಸಿ, ಸೈಅನ್ನಿಸಿ ಕೊಂಡಿದ್ದಾಗಿತ್ತು. ರೇಡಿಯೋ ನಿಲಯದವರು ಕಮಲೂಗೆ ಒಂದು ಪ್ರೋಗ್ರಾಂ ಸಹ ಕೊಟ್ಟರು. ಜಾನಕಮ್ಮನವರಿಗೆ ಸ್ವರ್ಗ ಮೂರು ಬೆರಳು ಮಾತ್ರ ಉಳಿಯಿತು. ಕಮಲೂನ ರೇಡಿಯೋ ಪ್ರೋಗ್ರಾಂ ಕೇಳಲು ನಂಜನಗೂಡಿನಿಂದ ಜಾನಕಮ್ಮನವರ ತಮ್ಮ ಸುಬ್ಬರಾಯ, ಹೆಂಡತಿ ಮಕ್ಕಳೊಡನೆ ಮೈಸೂರಿಗೆ ಬಂದ. ಪತ್ರಿಕೆಯಲ್ಲಿ ಸುದ್ದಿ ಯನ್ನು ನೋಡಿದ್ದನಂತೆ.

ಪ್ರೋಗ್ರಾಂ ಇದ್ದ ದಿನ ಮನೆಯಲ್ಲಿ ಸಡಗರವೇ ಸಡಗರ. ಹಿರಿಯಣ್ಣಯ್ಯನವರು ಆ ದಿನ ರಜಕ್ಕೆ ಬರೆದು ಹಾಕಿಕೊಂಡಿದ್ದರು. ಬೆಳಿಗ್ಗೆ ೧೦ ಗಂಟೆಗೆ ಪ್ರೋಗ್ರಾಂ ಎಂತ ನಿರ್ಧರವಾಗಿತ್ತು. ಹಿರಿಯಣ್ಣಯ್ಯನವರು ಯಾರನ್ನೋ ಕಾಡಿ ಬೇಡಿ ಒಂದು ರೇಡಿಯೋವನ್ನು (ತಮ್ಮ ಮಗಳ ಪ್ರೋಗ್ರಾಂ ಕೇಳುವ ಮಟ್ಟಿಗೆ) ತಂದಿದ್ದರು. ಒಂಭತ್ತೂವರೆ ಗಂಟೆ ಹೊತ್ತಿಗೆ ಸಾಲಂಕೃತಳಾದ ಕಮಲೂ ಅವಳ ಅಣ್ಣ ನಂಜುಂಡನೊಡನೆ ರೇಡಿಯೋ ನಿಲಯಕ್ಕೆ ಹೊರಡಲನುವಾದಳು. ಮನೆ ಮುಂದೆ ಷಾಪಸಂದ್ ನಿಂತಿದ್ದೇ ತಡ, ಅಣ್ಣ, ತಂಗಿ ಚಣ್ಣನೆ ಹಾರಿ ಕುಳಿತುಕೊಂಡು ಹೊರಟೇಬಿಟ್ಟರು.

ಕಮಲೂ ರೇಡಿಯೋ ಸ್ಟೇಷನ್ನಿಗೆ ಹೋದ ಸ್ವಲ್ಪ ಹೊತ್ತಿನ ಮೇಲೆ ಹಿರಿಯಣ್ಣಯ್ಯನವರು ತಾವು ತಂದಿದ್ದ ರೇಡಿಯೋವಿನ ಕಿವಿ ...ಲಾರಂಭಿಸಿದರು. ಸಿಲೋನ್, ಮಾಸ್ಕೋ, ಮದ್ರಾಸ್,

ಧಾಕ, ಬೊಂಬಾಯಿ ಸ್ಟೇಷನ್‌ಗಳು ಸಿಕ್ಕುತ್ತಿದ್ದವೇ ವಿನಾ ಅದೇ ಊರಿನಲ್ಲಿದ್ದ ಮೈಸೂರು ಸ್ಟೇಷನ್ ಸಿಕ್ಕುತ್ತಿರಲಿಲ್ಲ. ಇದಕ್ಕೆ ಹಿರಿಯಣ್ಣಯ್ಯನವರ ಅನನುಭವವೂ ಕಾರಣವಿರಬಹುದು. ಅಂತೂ ಹತ್ತು ಗಂಟೆ ಐದು ನಿಮಿಷಕ್ಕೆ ಮೈಸೂರು ಸ್ಟೇಷನ್ ಸಿಕ್ಕಿತು. ಅಂತಹ, ಸುಶ್ರಾವ್ಯವಾದ ಪಿಟೀಲು ವಾದನ ಕೇಳಿಬರುತ್ತಿತ್ತು. ಹಿರಿಯಣ್ಣಯ್ಯನವರ ಕಣ್ಣುಗಳಿಂದ ಆನಂದ ಬಾಷ್ಪ ತಾನೇ ತಾನಾಗಿ ಧಾರೆ ಧಾರೆಯಾಗಿ ಹರಿಯುತ್ತಿತ್ತು. ಜಾನಕಮ್ಮನವರು ತಕತಕನೆ ಕುಣಿಯುತ್ತಿದ್ದರು. ಸುಬ್ಬಯ್ಯ ಮತ್ತು ಅವನ ಸಂಸಾರದವರಿಗೆ ಮುಖ ಮುದ್ರೆ ಯಾವ ರೀತಿ ಮಾಡಬೇಕೆಂದು ತಿಳಿಯದೆ ತೆಪ್ಪಗೆ ಕೂತಿದ್ದರು. ಸುಮಾರು ಹತ್ತು ನಿಮಿಷ ಕಳೆಯಿತು. ಅಷ್ಟರಲ್ಲಿ ಹೊರಗಡೆ ಸದ್ದಾಯಿತು. ಕಮಲೂ ನಂಜುಂಡ ಕೆಟ್ಟಮುಖ ಮಾಡಿಕೊಂಡು ಒಳಕ್ಕೆ ಬಂದರು. "ಅಮ್ಮಾ ನಾವು ಹತ್ತಿದ್ದ ಗಾಡಿ ಮುಂದೆ ಹೋಗದೆ ಹಿಂದಕ್ಕೆ ಬಂತು. ಮೊದಲು, ಗಾಡಿಯವನು ಕೆಳಗೆ ಬಿದ್ದ. ನಮ್ಮ ಗಾಡಿ ಓಡಿತು. ಆಮೇಲೆ ಗಾಡಿ ಹೊಡೆಯೋನು ಬಂದು ಅದರ ಮೇಲೆ ಕೂತ ಮೇಲೆ ಹಿಂದ ಹಿಂದಕ್ಕೆ ಬಂತು" ಅಂತ ಕಮಲು ಹೇಳಿದಳು. ಅಷ್ಟರಲ್ಲಿಯೇ ರೇಡಿಯೋದಲ್ಲಿ "ಇದುವರೆಗೂ ನಿಲಯ ವಿದ್ವಾಂಸರಿಂದ ಪಿಟೀಲು ವಾದನ ಕೇಳಿದಿರಿ. ಮಿಸ್ ಕಮಲೂ ಅವರು ಬಾರದಿದ್ದುದರಿಂದ ನಿಲಯದ ವಿದ್ವಾಂಸರು ಪಿಟೀಲು ನುಡಿಸಿದರು" ಎಂದು ಹೇಳಲಾಯಿತು.

---

# ಪತ್ರಿಕೆ ತಯಾರಿಕೆಯ ಸುಲಭ ಪಾಠಗಳು

"ಮನೆ ಕಟ್ಟಿನೋಡು, ಮದುವೆ ಮಾಡಿನೋಡು'' ಎಂಬೊಂದು ಗಾದೆಯು ಮಾತಿರುವುದು ಎಲ್ಲರಿಗೂ ತಿಳಿದಿದೆ. ಇದನ್ನು ಈಗಿನ ಕಾಲಕ್ಕೆ ತಕ್ಕಂತೆ ಬದಲಿಸಿದರೆ ಬಾಡಿಗೆ ಮನೆ ಹುಡುಕಿನೋಡು ಪತ್ರಿಕೆ ನಡೆಸಿ ನೋಡು (ಅಥಾರಟಿ–ನಾಡಿಗೇರ್) ಅಂತ ಆಗುತ್ತದೆ. ಆದರೂ ಈ ಕಷ್ಟಸಾಧ್ಯ ವೃತ್ತಿಗೆ ಎಲ್ಲರೂ ಧಾವಿಸುತ್ತಿದ್ದಾರೆ. ಸಾಮಾನ್ಯವಾಗಿ ಈಗಿನ ದಿನಗಳಲ್ಲಿ ಪತ್ರಿಕೆ ಹೊರಡಿಸದಿದ್ದವರೇ ಪಾಪಿಗಳು, ಇದೊಂದು ತರಹೆ ಸಾಂಕ್ರಾಮಿಕ ಜಾಡ್ಯ. ಪತ್ರಿಕೆ ಹೊರಡಿಸಿ ಅದನ್ನು ಕೆಲವೇ ತಿಂಗಳುಗಳಲ್ಲೇ ನಿಲ್ಲಿಸುವುದು ಒಂದು ತರಹೆ ''ಫ್ಯಾಷನ್'' ಎಂದು ಹೇಳಿದರೂ ಹೇಳಬಹುದು. ಇನ್ನೂ ಅನೇಕರು ಪತ್ರಿಕೆಗಳನ್ನು ಹೊರಡಿಸುವುದರಲ್ಲಿ ಕಾತುರರಾಗಿದ್ದಾರೆ. ಅಥವಾ ಕ್ಯೂ ನಿಂತಿದ್ದಾರೆಂದು ಹೇಳಿದರೂ ತಪ್ಪಾಗಲಾರದು. ಅಂಥವರ ಅನುಕೂಲಕ್ಕೆಂದು ಕೆಲವು ಸುಲಭ ಪಾಠಗಳನ್ನು ಇಲ್ಲಿ ಸೂತ್ರ ರೂಪವಾಗಿ ಬರೆದಿದ್ದೇನೆ ಈ ಪಾಠಗಳನ್ನು ಆಚರಿಸುವವರು ನನಗೆ ಯಾವ ತರಹೆ "ರಾಯಲ್ಟಿ" (ಸ್ವಾಮಿತ್ವ) ಕೊಡಬೇಕಾದ್ದಿಲ್ಲ ಮತ್ತು ಈ ಪಾಠಗಳ ಮೇಲೆ ಯಾವ ತರಹೆ "ಕಾಪಿರೈಟ್" ಹಾಕದಿರುವದರಿಂದ ನನಗೆ ತಿಳಿಯುದಂತೆ ಇದನ್ನು ಉಪಯೋಗ (ದುರುಪಯೋಗ) ಪಡಿಸಿಕೊಳ್ಳಬಹುದು.

ಪತ್ರಿಕೆ ನಡೆಸುವುದು ಲಾಭಕರವಲ್ಲೆಂಬುದು ಎಲ್ಲರಿಗೂ ಗೊತ್ತಿರುವ ವಿಚಾರ. (ನಡೆಯುತ್ತಿರುವ ಪತ್ರಿಕೆಗಳಿಗಿಂತ ನಿಂತಿರುವ ಪತ್ರಿಕೆಗಳ ಸಂಖ್ಯೆಯೇ ಹೆಚ್ಚಾಗಿರುವುದರಿಂದ) ಇದಕ್ಕೆ ನಮ್ಮ ಕೈಯಲ್ಲಿ

ರುವ ನಾಲ್ಕು ಪುಡಿಗಾಸುಗಳನ್ನು ಹಾಕುವುದಕ್ಕೆ ಬದಲು, ಇತರರು ಹಣ ಹಾಕುವಂತೆ ಮಾಡಿ ನಾವು ಹೆಸರು ಸಂಪಾದಿಸಬೇಕು. (ಇಲ್ಲಿ ಇನ್ನೇನನ್ನೂ ಸಂಪಾದಿಸಲು ಸಾಧ್ಯವಿಲ್ಲವಾದ್ದರಿಂದ) ಇದಕ್ಕೆ ಪೀಠಿಕೆಯಾಗಿ "ವರಲ್ಡ್ ನ್ಯೂಸ್‌ಪೇಪರ್ ಪಬ್ಲಿಷಿಂಗ್ ಕಂಪೆನಿ" ಅಥವಾ ವಿಶಾಲಾರ್ಥ ಕೊಡುವ ಮತ್ತು ಹೆಸರು ಕೇಳಿದೊಡನೆ ಜನರು ಬೆಚ್ಚಿ ಬೀಳುವಂಥ ಒಂದು ಹೆಸರು ಕೊಡಬೇಕು. ಎಲ್ಲ ಭಾಷೆಗಳಲ್ಲಿಯೂ ಎಲ್ಲ ದೇಶಗಳಲ್ಲಿಯೂ ಪತ್ರಿಕೆ ಹೊರಡಿಸುವ ಉದ್ದಿಶ್ಯ ಇದೆಯೆಂದೂ, ಆರಂಭದಲ್ಲಿ ಕನ್ನಡದಲ್ಲಿ ದಿನ (ದೀನ) ಪತ್ರಿಕೆಯನ್ನು ಆರಂಭಿಸುವುದು ಈ ಜಾಯಿಂಟ್ ಸ್ಟಾಕ್ ಕಂಪನಿಯ ಉದ್ದಿಶ್ಯವೆಂದೂ ತಿಳಿಸಬೇಕು. ಮತ್ತು ಕಂಪನಿಯ ಪ್ರಾಸ್‌ಪೆಕ್ಟಸ್ಸಿನಲ್ಲಿ ಡೈರೆಕ್ಟರುಗಳ ಹೆಸರುಗಳನ್ನು ಕೊಡುವಾಗ ಶ್ರೀ........ವರ್ತಕರು. (ಇವರು ಬೀಡಿ ಅಂಗಡಿ–ಡಬ್ಬಾ ಮಾದರಿಯ–ಮಾಲಿಕರು ಎಂಬ ರಹಸ್ಯ ಬೇರೆಯವರಿಗೇನು ಗೊತ್ತು ?) ಶ್ರೀ................ಜಮೀನ್ದಾರರು (ನಾಲ್ಕುಗುಂಟೆ ಬಂಜರು ಭೂಮಿ) ಮುಂತಾಗಿ ತಿಳಿಸಿರಬೇಕು. ಮತ್ತು ಶ್ರೀ................ನಿವೃತ್ತರು— ಪೋಲೀಸ್ ಡಿಪಾರ್ಟ್‌ಮೆಂಟ್, ರೆವೆನ್ಯೂ ಡಿಪಾರ್ಟ್‌ಮೆಂಟ್ (ಅಲ್ಲಿ ಅವರು ನಿಜಕ್ಕೂ ಶಿಂಬೆ ಗುಮಾಸ್ತರಾಗಿದ್ದರು.) ಎಂತ ಹೆಸರುಗಳನ್ನು ಕೊಡಬೇಕು. ಬಾಡಿಗೆಗೆ ಒಂದು ಕಾರು ತೆಗೆದುಕೊಂಡು ದೇಶವನ್ನೆಲ್ಲಾ ಸುತ್ತಿ ಎಲ್ಲರಿಂದಲೂ ಷೇರು ಹಾಕಿಸಿ ಹಣ ವಸೂಲು ಮಾಡುವುದು. ಹೀಗೆ ವಸೂಲು ಮಾಡಿದ ಹಣದಿಂದ ಮುರುಕು ಪ್ರೆಸ್ ಒಂದನ್ನು ಕೊಂಡು ಕೆಲಸ ಆರಂಭಿಸುವುದು.

ದಿನಪತ್ರಿಕೆ ನಡೆಸುವಷ್ಟು ಸುಲಭವಾದುದು ಪತ್ರಿಕಾ ಪ್ರಪಂಚದಲ್ಲಿ ಇನ್ನಾವುದೂ ಇಲ್ಲ. ಬೇಡವೆಂದರೂ ಮಂತ್ರಿಗಳು ಮತ್ತು ನಾಯಕರು ಭಾಷಣಮಾಡುತ್ತಿದ್ದಾರೆ. ಈ ಭಾಷಣಗಳನ್ನು ಕುಂಬಳಕಾಯಿ ಅಕ್ಷರಗಳ ತಲೆಬರಹವನ್ನು ಕೊಟ್ಟು ಅಚ್ಚುಮಾಡುವುದು. ರಿಪಬ್ಲಿಕ್ ದಿನಾಚರಣೆ, ಸ್ವಾತಂತ್ರ್ಯೋತ್ಸವ, ಮಹಾರಾಜರ ವರ್ಧಂತಿ, ಇವು ಕೋಳಿ ಕೂಗುವ ಹಳ್ಳಿಗಳಲ್ಲೂ ಜರುಗುತ್ತವೆ. ಆಯಾ

ಕಾಲದಲ್ಲಿ ದಿನವೂ ಇವನ್ನು ಅಚ್ಚು ಹಾಕುವುದು. ರಾಮನವಮಿ ಕಾಲದಲ್ಲಿ ಸಂಗೀತ ಕಾರ್ಯಕ್ರಮಗಳಂತೂ ಇದ್ದೇ ಇರುತ್ತವೆ. ಪತ್ರಿಕೆಗಳಿಗೆ ಬೇಕಾದ ಸುದ್ದಿಗೂ ನಾವು ಪಡಿಪಾಟ ಪಡಬೇಕಾಗಿಲ್ಲ. ಹೇಗೂ ಬೇರೆ ಬೇರೆ ಪತ್ರಿಕೆಗಳು ಬರುತ್ತಿರುತ್ತವೆ. ಅವನ್ನೇ ಹಾಗಿಂದ ಹಾಗೇ ತೆಗೆದುಕೊಡುವುದು.

ಪ್ರತಿ ವಸ್ತು, ವಿಷಯಕ್ಕೂ ಆದಿ, ಮಧ್ಯ ಮತ್ತು ಅಂತ್ಯ ಇರುವ ಹಾಗೆ ಪತ್ರಿಕೆಗೂ ಅವಸ್ಥಾತ್ರಯಗಳಿವೆ. ದಿನಪತ್ರಿಕೆಯು ಆದಿ, ವಾರಪತ್ರಿಕೆ ಮಧ್ಯ ಮತ್ತು ಮಾಸಪತ್ರಿಕೆ ಅಂತ್ಯ. ದಿನಪತ್ರಿಕೆಯ ಕೆಲಸ ಕುಂಟುತ್ತ ನಡೆದಲ್ಲಿ ಅದನ್ನು ವಾರಪತ್ರಿಕೆಯಾಗಿ ಪರಿವರ್ತಿಸುವುದು. ಇದನ್ನು ನಡೆಸುವುದೂ ಸುಲಭ ಮಾರುದ್ದದ ಒಂದು ಕತೆ, ನೀವೇ ಬರೆದು ಅಥವಾ ಜೋತಿಷ್ಯ ತಿಳಿಯದವರಿಂದ ಭವಿಷ್ಯ ಬರೆಯಿಸುವುದು. ಪಡಿಯಚ್ಚುಗಳಿಗಂತೂ ಚಿತ್ರ ತಯಾರಕರು ಮತ್ತು ಹಂಚುವವರು ಹೇಗೂ ಇದ್ದಾರೆ. ಪಡಿಯಚ್ಚುಗಳನ್ನು ಮನಸ್ವಿಯಾಗಿ ಬಳಸಿ, ಈ ಪತ್ರಿಕೆಯೂ ನಿಂತರೆ ಕೊನೆಯ ಘಟ್ಟ ಮಾಸಿಕ (?) ಇದಕ್ಕೆ ಈಚೆಗೆ ಹೊಸದಾಗಿ ಹಿಂದೀ ಭಕ್ತರೂ ಹೊಲಸಾಗಿ ಹೇಗೂ ಕತೆಗಳನ್ನು ಭಾಷಾಂತರಿಸಿರುತ್ತಾರೆ. ಇವನ್ನು ಸುಖವಾಗಿ ಹಾಕಿಕೊಳ್ಳಬಹುದು. ೮-೧೦ ಪುಟಗಳ ಚಿತ್ರವಾಣಿ ಮಾಸ ಭವಿಷ್ಯ. ಹೀಗೆ ಏನಾದರೂ ತುಂಬಿದರೆ ಆಯಿತು.

———

# ತಿದ್ದುಪಡಿ

ಈಗ್ಗೆ ಕೆಲವು ದಿನಗಳ ಹಿಂದೆ ಪರೀಕ್ಷಾ ಫಲಿತಾಂಶಗಳು ಪತ್ರಿಕೆಗಳಲ್ಲಿ ಪ್ರಕಟವಾದವು. ಇದಾದ ಮೂರನೆಯ ದಿನ ಒಂದು ಪತ್ರಿಕೆಯು "ತಿದ್ದುಪಡಿ" ಯನ್ನು ಹಾಕಿ, ಹಿಂದಿನ ದಿನ ತಾನು ಪ್ರಕಟಿಸಿದ ಕೆಲವು ನಂಬರುಗಳು ತಲೆಕೆಳಕಾಗಿವೆಯೆಂದೂ, ತಪ್ಪನ್ನು ತಿದ್ದಿಕೊಂಡು ಓದಿ ಮಹಾಜನಗಳು ಸಹಕರಿಸಬೇಕೆಂದೂ ಕೋರಿದ್ದಿತು.

ಫಲಿತಾಂಶ ಪ್ರಕಟವಾದದ್ದಕ್ಕೂ ತಿದ್ದುಪಡಿ ಪ್ರಕಟವಾದದ್ದಕ್ಕೂ ಕೇವಲ ಇಪ್ಪತ್ತುನಾಲ್ಕು ಗಂಟೆಗಳ ವ್ಯತ್ಯಾಸ. ಆದರೆ ಈ ಅಲ್ಪ ಅವಧಿಯಲ್ಲಿ ಎಂತೆಂತಹ ರುದ್ರ ಭೀಕರ ನಾಟಕಗಳೂ, ದುರಂತವೆಂದೇ ಪರಿಗಣಿಸಲ್ಪಟ್ಟವು ಸುಖಾಂತವಾಗಿ ಪರಿವರ್ತಿತವಾದವೂ ಬಹಳ ಸ್ವಾರಸ್ಯವಾದ ಪ್ರಸಂಗಗಳು.

ನಾನು ಈ ಕೆಳಗೆ ಉಲ್ಲೇಖಿಸಿರುವ ಪ್ರಸಂಗಗಳು ಬರೀ ಊಹಾ ಪ್ರಪಂಚಕ್ಕೆ ಸೇರಿದವೆಂದು ಓದುಗರು ಭಾವಿಸಕೂಡದು. ಎಷ್ಟೋ ಜನರು ತಮ್ಮ ಅನುಭವವನ್ನು ನನ್ನಲ್ಲಿ ತೋಡಿಕೊಂಡಿದ್ದಾರೆ. ಸಾಮಾನ್ಯವಾಗಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವವರ ಸಂಖ್ಯೆಗಿಂತ ಹೊಂದದೆ ಇರುವವರ ಸಂಖ್ಯೆ ಅತಿ ಹೆಚ್ಚಾಗಿರುತ್ತದೆ. ಅವರದೇ "ಬ್ರೂಟ್ ಮೆಜಾರಟಿ." ಫಲಿತಾಂಶ ಹೊರಬೀಳುವ ಮುನ್ನವೇ ತಮ್ಮ ಅದೃಷ್ಟ ಏನೆಂಬುದನ್ನು ಬರೆದಿಟ್ಟುಕೊಂಡಿರುತ್ತಾರೆ. ತಮ್ಮ ಬೆಂದೊಡಲನ್ನು ತಣಿಸಲು ಫಲಿತಾಂಶದ ದಿನಕ್ಕಾಗಿ ಚಾತಕ ಪಕ್ಷಿಗಳಂತೆ ಕಾದಿರುತ್ತಾರೆ. ಆ ದಿನ ಪ್ಯಾಸಾದ ಪ್ರತಿ ಮಿತ್ರನಿಂದಲೂ ತಮಗೆ ಬೇಕು ಬೇಕಾದ ತಿಂಡಿ ಗಿಟ್ಟಿಸಿಕೊಳ್ಳುತ್ತಾರೆ. ಅನೇಕ ಸಂದರ್ಭಗಳಲ್ಲಿ ಪ್ಯಾಸಾದ ಈ ಪ್ರಾಣಿ, ತಾನು ಫೇಲಾಗಿದ್ದರೆ ಚೆನ್ನಾಗಿತ್ತು, ಇಷ್ಟು ಜನ ತಿಂಡಿಬಾಕರಿಗೆ ತಿಂಡಿ ಒದಗಿಸಲು ಹಣ ಎಲ್ಲಿಂದ ತರಬೇಕು—ಎಂದು ತನ್ನಲ್ಲಿಯೇ

ಗೊಣಗಿಕೊಂಡಿರುತ್ತಾನೆ. ಸಂದರ್ಭ ಹೀಗಿರುವಾಗ ಪತ್ರಿಕೆಯವರು ತಪ್ಪು ತಪ್ಪಾಗಿ ನಂಬರುಗಳನ್ನು ಹಾಕಿದರೆ, ಈ ದಿನ ಪ್ಯಾಸಾದ್ದಕ್ಕೆ ತಿಂಡಿ ಕೊಡಿಸಿ, ನಾಳೆ ಅದು ಫೇಲು ಅಂತ ಬಂದರೆ, ತಿಂಡಿತಿಂದ ಕದೀ ಮರು ವಾಪಸು ಹಣ ಕೊಡುತ್ತಾರೆಯೇ ?

ಇನ್ನು ಕೆಲವು ವಿದ್ಯಾರ್ಥಿಗಳು ತಮಗೆ ಫೇಲು ಅಂತ ಆದರೆ ಸಾಕು, ಆತ್ಮಹತ್ಯ ಮಾಡಿಕೊಳ್ಳಲು ಸರ್ವಸಿದ್ಧತೆಗಳನ್ನು ಮಾಡಿ ಕೊಂಡಿರುತ್ತಾರೆ. ರೇಲ್ವೆ ಕಂಬಿಗಳ ಮೇಲೆ ಮಲಗುವುದು, ಕೆರೆಗಳಲ್ಲಿ ಹಾರಿಕೊಳ್ಳುವುದು, ಮರಕ್ಕೆ ನೇಣು ಹಾಕಿಕೊಳ್ಳುವುದು, ಮುಂತಾದ ಕಾರ್ಯಕ್ರಮಗಳನ್ನಿಟ್ಟುಕೊಂಡಿರುತ್ತಾರೆ. ಪರೀಕ್ಷಾ ಫಲಿತಾಂಶಗಳು ಹೊರಬಿದ್ದ ಕೂಡಲೇ ಪೋಲೀಸಿನವರು ಊರಿನ ಸುತ್ತಮುತ್ತ ಇರುವ ಕೆರೆಗಳ ಸುತ್ತ ಪಹರೆ ಹಾಕಬೇಕು, ರೈಲು ಕಂಭಿಗಳನ್ನು ಕಾಯ ಬೇಕು, ಮತ್ತು ಎತ್ತರವಾದ ಮರಗಳನ್ನು ಎಚ್ಚರಿಕೆಯಿಂದ ನೋಡಿ ಕೊಂಡಿರಬೇಕು. ಹಾಗಾದರೆ ಈ ಬುದ್ಧಿ ಇಲ್ಲದ ವಿದ್ಯಾರ್ಥಿಗಳ ಮರಣವನ್ನು ಸಾಧ್ಯವಾದಷ್ಟು ಕಡಿಮೆ ಮಾಡಬಹುದು.

ಇನ್ನು ಕೆಲವು ವಿದ್ಯಾರ್ಥಿಗಳು—ಪ್ಯಾಸಾದವರು—ಆತ್ಮಹತ್ಯ ಕ್ಕಿಂತಲೂ ಮಿಗಿಲಾದ ಅನರ್ಥಕ್ಕೆ ಗುರಿಯಾಗುತ್ತಾರೆ. ' ಪ್ಯಾಸ್ ' ಅಂತ ಪತ್ರಿಕೆಗಳಲ್ಲಿ ಬಂದಕೂಡಲೇ ತಮ್ಮ ಮುಂದಿನ ವ್ಯಾಸಂಗಕ್ಕೆ ಅನುಕೂಲ ಮಾಡಿಕೊಡುವೆನೆಂದು ಹೇಳುವ ಮೊಟ್ಟ ಮೊದಲನೆಯ ಅರ್ಜಿದಾರ ಮಾವನಿಗೆ ಅವನ ಮಗಳನ್ನು ಮದುವೆಯಾಗುವುದಾಗಿ ಭಾಷೆ ಕೊಡುತ್ತಾರೆ. ಅನೇಕ ಸಂದರ್ಭಗಳಲ್ಲಿ ಅವನು ಮಾವನನ್ನೇ ಮದುವೆಯಾಗಿರುತ್ತಾನೆಯೇ ವಿನಾ ಹುಡುಗಿಯನ್ನಲ್ಲ. ಹುಡುಗಿ, ಅವನ ವಿದ್ಯಾರ್ಜನೆ ಮುಂದುವರಿಯಲು ಒಂದು ಸಾಧನ ಅಷ್ಟೇ, ಅದಕ್ಕೆ ಬೇರಿನ್ನಾವ ಗುಣಗಳೂ ಇಲ್ಲ. ಹೀಗೆ ಮೊದಲು ಪತ್ರಿಕೆಯಲ್ಲಿ ಪ್ಯಾಸಾಗಿ, ಯಾವುದಾದರೂ ಹುಡುಗಿಯನ್ನು ಮದುವೆ ಆಗಲು ಮಾತು ಕೊಟ್ಟು, ಅನಂತರ ತಿದ್ದುಪಡಿಯಲ್ಲಿ ಫೇಲಾದ ವಿದ್ಯಾರ್ಥಿಗಳು ಮದುವೆಯಾಗಬೇಕೋ ಅಥವಾ ಬೇಡವೋ ? ಫೇಲಾದ ಹುಡುಗನಿಗೆ

ಆ ಮಾವ ಎನ್ನಿಸಿಕೊಂಡ ಪ್ರಾಣಿ ತನ್ನ ಮಗಳನ್ನು ಧಾರೆ ಎರೆಯುವ ದಾದರೂ ಹೇಗೆ?

ಈಗ್ಗೆ ಕೆಲವು ವರ್ಷಗಳ ಹಿಂದೆ ಬಿಜಾಪುರದ ವಿದ್ಯಾರ್ಥಿಯೊಬ್ಬನು ಯಾವುದೋ ಪರೀಕ್ಷೆಗೆ ಕುಳಿತಿದ್ದನು. ಅವನು ಒಂದನೇ ತರಗತಿಯಲ್ಲಿ ಉತ್ತೀರ್ಣನಾಗಬಹುದೆಂಬ ನಂಬಿಕೆ ಅವನಿಗಿದ್ದಿತು. ಆದರೆ ಫಲಿತಾಂಶ ಪತ್ರಿಕೆಯಲ್ಲಿ ಪ್ರಕಟವಾದಾಗ ಅವನು ಫೇಲಾಗಿದ್ದನು. ಆ ಹುಡುಗನಿಗೆ ಬೇರಾವ ಮಾರ್ಗವೂ ತೋರದೆ ಆತ್ಮಹತ್ಯ ಮಾಡಿಕೊಂಡು ತನ್ನ ಸಮಸ್ಯೆಯನ್ನು ನಿವಾರಿಸಿಕೊಂಡ. ಆದರೆ ಮಾರನೆಯ ದಿನ ಅದೇ ಪತ್ರಿಕೆ ತಿದ್ದುಪಡಿ ಹಾಕಿ ಆ ಫೇಲಾದ ಹುಡುಗ ಒಂದನೇ ತರಗತಿಯಲ್ಲಿ ಪ್ಯಾಸಾಗಿರುವನೆಂದು ಸಂಜೀವಿನಿ ಸಿಂಪಡಿಸಿತ್ತು. ಆದರೆ ಸತ್ತು ಹೋದ ಹುಡುಗನನ್ನು ಬದುಕಿಸಲು ಆ ಸಂಜೀವಿನಿಯಿಂದ ಸಾಧ್ಯವಾಗಲಿಲ್ಲ.

ಈ ತಿದ್ದುಪಡಿಗಳ ಅವಾಂತರ ಬರೀ ಪರೀಕ್ಷಾ ಫಲಿತಾಂಶಕ್ಕೆ ಮಾತ್ರವೇ ಮುಗಿಯಲಿಲ್ಲ. ನಮ್ಮ ನಿತ್ಯ ಜೀವನದ ನಾನಾ ಕ್ಷೇತ್ರಗಳಲ್ಲೂ ಅದು ತಾಂಡವವಾಡುತ್ತಿದೆ. ಮುಖ್ಯವಾಗಿ ಪತ್ರಿಕೆಯವರಿಗೆ ಇದೊಂದು "ಸೇಫ್ಟಿ ವಾಲ್ವ್". ಮೊದಲು ಬಹಳ ಕೆಟ್ಟ ಕೆಟ್ಟದಾಗಿ ತಮಗೆ ಬೇಡವಾದವರ ಮೇಲೆ ಕುಂಬಳಕಾಯಿ ಅಕ್ಷರಗಳಿಂದ ಎಲ್ಲರಿಗೂ ಕಾಣುವಂತೆ ಏನು ಏನಾದರೂ ಬಯ್ದು ಬರೆಯುವುದು. ಮಾರನೆಯ ದಿನ ಯಾರಿಗೂ ಕಾಣದಂತೆ ಸಾಸುವೆಕಾಳು ಅಕ್ಷರದಲ್ಲಿ ತಿದ್ದುಪಡಿಯನ್ನು ಹಾಕಿ ನೊಂದವರ ಕ್ಷಮೆ ಕೇಳಿಕೊಳ್ಳುವುದು. "ಊ[illegible] ಹೊರಗೆ ಪಾದರಕ್ಷೆಯಿಂದ ಹೊಡೆದು ಅಡಿಗೆ ಮನೆಯಲ್ಲಿ ಕಾಲು ಹಿಡಿದು[illegible] ಕೊಂಡರು" ಎಂಬಂತೆ ಇರುತ್ತದೆ ಈ ತಿದ್ದುಪಡಿ ಪ್ರಕರಣ.

"ಶ್ರೀ....................ನಿಧನರಾದರೆಂದು ತಿಳಿಸಲು ವಿಷಾದಿಸು[illegible]ತ್ತೇವೆ. ಅವರ ಅಗಲುವಿಕೆಯನ್ನು ಭರಿಸಲು ಅವರ ಬಂಧು ಮಿತ್ರರಿಗೆ ಪರಮಾತ್ಮನು ಶಕ್ತಿ ಕೊಡಲೆಂದು ಪ್ರಾರ್ಥಿಸುತ್ತೇವೆ" ಎಂತ ಪತ್ರಿಕೆಯಲ್ಲಿ ಪ್ರಕಟವಾಗಿರುತ್ತದೆ. ಮಾರನೆಯ ದಿನ "ನಿನ್ನಿನ ದಿ[illegible]

ನಿಧನರಾದವರು ಶ್ರೀ............ರಲ್ಲವೆಂದು ತಿಳಿಸಲು ವಿಷಾದಿಸುತ್ತೇವೆ" ಎಂಬ ತಿದ್ದುಪಡಿ ಪ್ರಕಟವಾಗಿರುತ್ತದೆ. ಇವರು ನಿಧನರಾಗದಿದ್ದುದಕ್ಕೆ ಸಂಪಾದಕರು ಬಹಿರಂಗವಾಗಿಯೇ ವಿಷಾದ ವ್ಯಕ್ತಪಡಿಸಿರುತ್ತಾರೆ.

ನಿಯಮಗಳಿಗಿಂತ ಅಪವಾದಗಳೇ ಹೆಚ್ಚು, ಎಂಬಂತೆ, ಕೆಲವು ಶಾಸನಗಳನ್ನು ಜಾರಿ ಮಾಡುವಾಗ ಅವಕ್ಕೆ ಬಾಲಂಗೋಚಿಯಂತೆ ನೂರಾರು ತಿದ್ದುಪಡಿಗಳಿರುತ್ತವೆ. ಉದಾಹರಣೆಗೆ, ಈಗ ಹಿಂದೂ ಕೋಡ್ ಬಿಲ್‌ಗೆ ೩೦೦ಕ್ಕಿಂತ ಹೆಚ್ಚು ತಿದ್ದುಪಡಿಗಳನ್ನು ಸೂಚಿಸ ಲಾಗಿದೆ. ಈ ೩೦೦ ತಿದ್ದುಪಡಿಗಳ ಬಗ್ಗೆ ಚರ್ಚೆಯಾಗಿ ನಿರ್ಣಯ ವಾಗುವ ವೇಳೆಗೆ, ಮೂಲ ಮಸೂದೆಯೇ ಅದನ್ನು ಮಂಡಿಸಿರುವ ಪುಣ್ಯಾತ್ಮರಿಗೆ ಮರೆತುಹೋಗಿರುತ್ತದೆ.

ಅಲ್ಲದೆ ಯಾವ ಮಸೂದೆ ಬಂದರೂ ಅದಕ್ಕೊಂದು ತಿದ್ದುಪಡಿ ತರುವುದು ಈಗಿನ ಕಾಲಕ್ಕೆ ಒಂದು ಫ್ಯಾಷನ್ ಆಗಿದೆ. ಸದಸ್ಯರಾಗಿ ಹೋದ ಮೇಲೆ ಒಂದು ತಿದ್ದುಪಡಿ ಸಹ ಸೂಚಿಸದಿದ್ದರೆ ಏನು ಪ್ರಯೋಜನ ?

———

# ಅಶ್ವ ಸಾಹಿತ್ಯ

ಮೇ ತಿಂಗಳ ಕೊನೆಯ ವಾರದಲ್ಲಿ ಬೆಂಗಳೂರು ನಗರದಲ್ಲಿ ಕುದುರೆ ಜೂಜು ಆರಂಭವಾಗುತ್ತದೆ. ಇದಕ್ಕಾಗಿ ಚಾತಕ ಪಕ್ಷಿಗಳಂತೆ ಕಾದಿರುವ ಅಶ್ವ ಪ್ರೇಮಿಗಳ ಸಂಖ್ಯೆ ಹತ್ತಾರು ಸಹಸ್ರ ಇದೆ ಜೂಜು ಎಂಬ ಶಬ್ದ ಇದ್ದಲ್ಲಿ ಹಣ ಕಳೆದುಕೊಳ್ಳುವ ಅಥವಾ ಗೆಲ್ಲುವ ಸಂಭವ ಇದ್ದೇ ಇದೆ. ಇದರಲ್ಲಿ ಹಣಕ್ಕಿಂತಲೂ ಹೆಚ್ಚಾಗಿ ಹಾಳಾದ ಜೂಜಿನ ಗೀಳು ಇದೆ. ಇದೇ ಜನಗಳನ್ನು ಹೆಚ್ಚಾಗಿ ಆಕರ್ಷಿಸುತ್ತದೆ.

ಕುದುರೆ ಜೂಜಿನ ಬಗ್ಗೆ ಸುದೀರ್ಘವಾದ ಮತ್ತು ಗಂಭೀರವಾದ ಲೇಖನ ಬರೆಯಲು ನಾನು ಹೊರಟಿಲ್ಲ. ಇಂಥ ಗಂಭೀರ ವಿಷಯ ವಾದ ಕುದುರೆ ಜೂಜಿನಲ್ಲಿಯೂ ನಾವು ನಗೆಮಿಂಚುಗಳನ್ನು ಕಾಣ ಬಹುದು. ಅವುಗಳ ವಿವರಣೆಯೇ ಪ್ರಸ್ತುತ ಲೇಖನ.

× × ×

ಈ ಅಶ್ವ ಸಾಹಿತ್ಯದ ಬಗ್ಗೆ ನಾನೂ ಬಹಳ ಸಂಶೋಧನೆ ನಡೆಸಿ ದ್ದೇನೆ. ಈ ಜೂಜು ಮೊದಲು-ಸುಮಾರು ಒಂದು ಶತಮಾನದ ಹಿಂದೆ ಇಂಗ್ಲೆಂಡಿನಲ್ಲಿ ಆರಂಭವಾಯಿತೆಂದು ಹೇಳಲಾಗಿದೆ. ಭವ್ಯ ವಾದ ಚಕ್ರಾಧಿಪತ್ಯಗಳನ್ನು ಕಟ್ಟಿದ ರೋಮನ್ ಮತ್ತು ಗ್ರೀಕರ ಕಾಲದಲ್ಲಿ ಕುದುರೆ ಜೂಜು ಆರಂಭವಾಯಿತೆಂದು ಹೇಳುತ್ತಾರೆ. ಆದರೆ ನನ್ನ ಸಂಶೋಧನ ರೀತ್ಯಾ ಈ ಅಶ್ವ ಸಾಹಿತ್ಯ ನಮ್ಮ ಪುರಾಣ ಯುಗದಲ್ಲಿ ಆರಂಭವಾಯಿತೆಂದು ಕಂಡು ಬರುತ್ತದೆ. ಶ್ರೀ ರಾಮ ಚಂದ್ರನು ಅಶ್ವಮೇಧಯಾಗ ಮಾಡಲು ಅಶ್ವವನ್ನು ಕಳಿಸುತ್ತಾನೆ. ಅದರ ಹಿಂದೆ ಲಕ್ಷ್ಮಣ ಹೊರಟಿದ್ದಾನೆ. ಆ ಕುದುರೆಯನ್ನು ಲವ ಕುಶರು ಕಟ್ಟಿ ಹಾಕುತ್ತಾರೆ. ಆ ಕುದುರೆ ಗೆಲ್ಲುತ್ತದೋ ಇಲ್ಲವೋ

ಎಂದು ಆಗಲೇ ಜನಗಳು ಬೆಟ್ ಕಟ್ಟಿದ್ದರಂತೆ ! ಅಲ್ಲಿಂದಲೇ ಈ ಕುದುರೆ ಜೂಜು ಆರಂಭವಾಗಿರಬೇಕು.

× × ×

ಜೂಜಿನಲ್ಲಿ ಯಾವ ಕುದುರೆ ಗೆಲ್ಲುತ್ತದೆಂಬುದನ್ನು ಕಂಡು ಹಿಡಿಯಲು ಪಂಟರ್ಸ್‌ಗಳು ನಾನಾ ಮಾರ್ಗಗಳನ್ನು ಅನುಸರಿಸುತ್ತಾರೆ. ಅವುಗಳಲ್ಲಿ ಸ್ವಾರಸ್ಯವಾದ ಕೆಲವನ್ನು ಇಲ್ಲಿ ಉಲ್ಲೇಖಿಸುತ್ತೇನೆ.

ಕೆಲವರು ಓಡುವ ಕುದುರೆಗಳ ಪರಿಶ್ರಮ, ಅವುಗಳ ಟ್ರೈನಿಂಗ್ ಮೇಲೆ, ಅವಕ್ಕೆ ಆ ದಿನ ಕೊಟ್ಟ ತೂಕದ ಮೇಲೆ ಲೆಕ್ಕ ಹಾಕುತ್ತಾರೆ. ಇನ್ನು ಕೆಲವರು ತಮ್ಮ ಜಾತಕ ರೀತ್ಯಾ ಜೂಜಿನ ದಿನ ತಮಗೆ ಯಾವ ಬಣ್ಣ ಮತ್ತು ಸಂಖ್ಯೆಗಳ ಬಲುಮೆ ಇದೆಯೆಂಬುದನ್ನು ಲೆಕ್ಕಹಾಕಿ ಆಯಾ ಬಣ್ಣದ ಕುದುರೆಗಳ ಮತ್ತು ಅವುಗಳ ಸಂಖ್ಯೆಯ ಮೇಲೆ ಹಣ ಕಟ್ಟುತ್ತಾರೆ. ಇನ್ನು ಕೆಲವರು ಇಂಥಿಂಥ ವಾರದಲ್ಲಿ ಇಂಥಿಂಥ ನಂಬರುಗಳಿಗೆ ಬಲುಮೆ ಇದೆ ಎಂಬುದನ್ನು ಗೊತ್ತು ಮಾಡಿಟ್ಟುಕೊಂಡು ಆ ನಂಬರುಗಳ ಕುದುರೆಗಳ ಮೇಲೆ ಹಣ ಕಟ್ಟುತ್ತಾರೆ.

ಇದಕ್ಕಿಂತಲೂ ಬಹು ಸುಲಭವಾದ ಇನ್ನೊಂದು ಮಾರ್ಗವಿದೆ. ಇದಕ್ಕೆ "ಚುಚ್ಚು ಕಡ್ಡಿ" ಲೆಕ್ಕ ಎಂದು ಹೇಳುತ್ತಾರೆ. ಆಯಾ ದಿನದ ರೇಸ್ ಪುಸ್ತಕ ತೆಗೆದುಕೊಂಡು, ಆಯಾ ರೇಸಿನ ಹಾಳೆ ತೆಗೆದಿಟ್ಟುಕೊಳ್ಳುವುದು. ತಮ್ಮ ಕುಲದೈವವನ್ನು ಪ್ರಾರ್ಥಿಸಿ ಕಣ್ಣು ಮುಚ್ಚಿಕೊಂಡು, ಒಂದು ಕಡ್ಡಿಯನ್ನು ಆ ಹಾಳೆಯ ಮೇಲೆ ಇಡುವುದು. ಯಾವ ಕುದುರೆ ಹೆಸರಿನ ಮೇಲೆ ಆ ಕಡ್ಡಿ ಕೂರುವುದೋ ಆ ಕುದುರೆಯ ಮೇಲೆ ಹಣ ಕಟ್ಟುವುದು.

ಇನ್ನು ಕೆಲವರು "ಇನ್‌ಫರ್ಮೇಷನ್" ಮೇಲೆ ಹಣ ಕಟ್ಟುವವರಿದ್ದಾರೆ. ಜಾಕಿ, ಟ್ರೇನರ್ ಮತ್ತು ಓನರ್‌ಗಳಿಂದ ಆ ದಿನ ಯಾವ ಕುದುರೆ ಗೆಲ್ಲುತ್ತದೆಂಬುದನ್ನು ತಿಳಿದು ಅವುಗಳ ಮೇಲೆ ಹಣ ಕಟ್ಟುತ್ತಾರೆ. ಒಂದೊಂದು ಸಾರಿ ಈ ಇನ್‌ಫರ್ಮೇಷನ್ ಅವಾಂತರ ಎಷ್ಟಾಗಿರುತ್ತದೆಂದರೆ, ಒಂದೇ ರೇಸಿನಲ್ಲಿ ನಾಲ್ಕಾರು ಕುದುರೆಗಳು ಗೆಲ್ಲುತ್ತವೆ, ಎಂದು ವರ್ತಮಾನ ಬಂದಿರುತ್ತದೆ. ಇದರಲ್ಲಿ ಯಾವ

ಇನ್‌ಫರ್ಮೇಷನ್ ನಂಬಿ ಹಣಕಟ್ಟಬೇಕೆಂದು ತಿಳಿಯದೆ ಪಂಟರ್ಸ್‌ಗಳು ತಬ್ಬಿಬ್ಬಾಗುತ್ತಾರೆ ಕೆಲವರಿಗೆ ಈ ಇನ್‌ಫರ್ಮೇಷನ್ ಒದಗಿಸುವುದೇ ಕುದುರೆ ಜೂಜಿನ ಸೀಜನ್‌ನಲ್ಲಿ ಒಂದು ಕಸುಬಾಗಿರುತ್ತದೆ. ಎಲ್ಲರಿಗೂ ಇನ್‌ಫರ್ಮೇಷನ್ ಒದಗಿಸಿ ಹಣ ಗಿಟ್ಟಿಸಿಕೊಳ್ಳುವುದೇ ಅವರ ದೊಡ್ಡ ಗುಣ.

ಈ ಇನ್‌ಫರ್ಮೇಷನ್ ಸರಿಯಾದ ಕಡೆಯಿಂದ ಬಂತೆಂಬುದನ್ನು ಹೇಳುವುದೂ ಒಂದು ವೈಖರಿಯಾಗಿದೆ. "ಜಾಕಿ........ಇದ್ದಾನಲ್ಲ, ಅವನೊಬ್ಬ ಸೂಳೆಯನ್ನು ಮಡಗಿಕೊಂಡಿದ್ದಾನೆ. ಆ ಸೂಳೆಗೆ ಆ ಜಾಕಿ ಇಂಥ ಕುದುರೆ ವಿನ್ ಆಗುತ್ತದೆ ಎಂದು ಹೇಳಿದ್ದನಂತೆ. ಆ ಸೂಳೆಯ ಸೋದರಮಾವ ನನಗೆ ಇನ್‌ಫರ್ಮೇಷನ್ ಕೊಟ್ಟ." ಇದನ್ನು ನಂಬದಿರುವುದಾದರೂ ಹೇಗೆ, ಕುದುರೆಯ ಸಾರಥಿಯೇ ಇನ್‌ಫರ್ಮೇಷನ್ ಕೊಟ್ಟ ಮೇಲೆ, ಆ ಕುದುರೆಯ ಮೇಲೆ ಹಣ ಕಟ್ಟದಿದ್ದರೆ ಹೇಗೆ?

ಒಂದು ಸಾರಿ ನಾನೂ ರೇಸ್ ಮೀಟಿಂಗಿಗೆ ಹೋಗಿದ್ದೆ-ಸಾಮಾನ್ಯವಾಗಿ ಹೋಗುತ್ತಲೇ ಇರುತ್ತೇನೆ ಅನ್ನಿ—ಕುದುರೆಗಳೆಲ್ಲಾ ಪ್ಯಾಡಕ್‌ನಿಂದ ಬಂದವು. ಅವುಗಳನ್ನು ಠೀವಿಯಿಂದ ಅತ್ತಿಂದ ಇತ್ತ ತಿರುಗಾಡಿಸುತ್ತಿದ್ದರು. ಅಷ್ಟರಲ್ಲಿ ಒಂದು ಕುದುರೆ ಲದ್ದಿ ಹಾಕಿತು. ಪಕ್ಕದಲ್ಲಿಯೇ ಇದ್ದವನೊಬ್ಬ ನನ್ನ ಬೆನ್ನು ತಟ್ಟಿದ. ತಿರುಗಿ ನೋಡಿದೆ. "ಸ್ವಾಮೀ, ಲದ್ದೀ ಹಾಕಿದ ಆ ಕುದುರೆಯ ಮೇಲೆ ನೀವು ಎಷ್ಟು ಬೇಕಾದರೂ ಹಣ ಕಟ್ಟಿ, ಅದು ಖಂಡಿತ ವಿನ್ ಆಗುತ್ತೆ" ಅಂತ ಹೇಳಿದ. "ಅದು ಹ್ಯಾಗಯ್ಯಾ, ಯಾವ ಧೈರ್ಯದ ಮೇಲೆ ನೀನು ಹಾಗೆ ಹೇಳುತ್ತೀಯಾ?" ಅಂತ ಅವನನ್ನು ಕೇಳಿದೆ. "ಸ್ವಾಮಿ ಅದು ಲದ್ದಿ ಹಾಕಿದ್ದರಿಂದ ಎಂಟು ಪೌಂಡು ಕಡಿಮೆ ಆಯಿತು. ತೂಕ ಕಡಿಮೆ ಆದ್ದರಿಂದ ಅದು ಸಲೀಸಾಗಿ ಗೆಲ್ಲುತ್ತೆ" ಅಂತ ಹೇಳಿದ. ಅವನ ತರ್ಕ ನನಗೂ ಹಿಡಿಯಿತು. ಆ ಕುದುರೆಯ ನಂಬರ್ ಹದಿಮೂರು. ಆ ರೇಸ್‌ನಲ್ಲಿ ಅದು ಓಡಿದಾಗ ಅದು ಹದಿಮೂರನೆಯ ಸ್ಥಾನವನ್ನು ಮುಟ್ಟಿದ್ದಿತು.

× × ×

ವಿನ್ ಕುದುರೆಗಳನ್ನು ಕಂಡು ಹಿಡಿಯುವುದರಲ್ಲಿ ಇನ್ನೂ ಕೆಲವು ವಿಚಿತ್ರ ಮಾರ್ಗಗಳಿವೆ. ಕ್ಯಾಲೆಂಡರ್‌ನಲ್ಲಿರುವ ಅಂಕೆಗಳನ್ನು ಮಡಿಸಿ ಒಂದು ಕಡೆ ಗುಡ್ಡೆ ಹಾಕುವುದು. ಮನೆಯಲ್ಲಿರುವ ಎಳೆ ಮಗುವಿನ ಕೈಯಿಂದಲೋ ಅಥವಾ ಅದೇ ಸ್ನಾನಮಾಡಿ ಮಡಿ ಉಟ್ಟಿರುವ ಹೆಂಡತಿಯ ಕೈಯಿಂದಲೋ ಒಂದೊಂದಾಗಿ ಚೀಟಿ ಎತ್ತಿಸುವುದು. ಮೊದಲು ಎತ್ತಿದ ನಂಬರಿನ ಚೀಟಿಯನ್ನು ಮೊದಲನೇ ರೇಸಿನಲ್ಲಿ ಆಡುವುದು, ಎರಡನೇ ಚೀಟಿಯ ನಂಬರನ್ನು ಎರಡನೇ ರೇಸಿನಲ್ಲಿ ಆಡುವುದು, ಹೀಗೆ ಆ ದಿನ ಎಷ್ಟು ರೇಸುಗಳಿರುತ್ತವೆಯೋ ಅಷ್ಟು ನಂಬರುಗಳ ಚೀಟಿ ಎತ್ತಿಸಿ ಅವುಗಳ ಮೇಲೆ ಆಡುವುದು.

× × ×

ಒಂದು ವರ್ಷ ಕುದುರೆ ಜೂಜಿನಲ್ಲಿ ನಾನು ತುಂಬಾ ಹಣ ಕಳೆದಿದ್ದೆ. ಇದರ ಕಮರುವಾಸನೆ ನನ್ನ ಹೆಂಡತಿಯ ಮೂಗಿಗೆ ಹೇಗೋ ತಾಕಿದ್ದಿತು. ಒಂದು ದಿನ ನಮ್ಮ ಮನೆ ಕಾಂಪೌಂಡಿನಲ್ಲಿ ಒಂದು ಕುಂಟು ಕುದುರೆ (ಜಟಕಾದ್ದೇ ಇರಬೇಕು) ಹುಲ್ಲು ಮೇಯುತ್ತಿತ್ತು. ಆ ಕುದುರೆಯನ್ನು ಕಂಡೊಡನೆ ನನ್ನ ಹೆಂಡತಿ ಮಡಿ ಕೋಲಿನಿಂದ ಅದನ್ನು "ರಪ ರಪ" ಬಡಿದಳು. ಎಲ್ಲೋ ಹೋಗಿದ್ದವನು ಆಗ ತಾನೇ ಕಾಂಪೌಂಡಿನಲ್ಲಿ ಕಾಲಿಟ್ಟೆ. "ಅದನ್ಯಾಕೆ ಹಾಗೆ ಸಾಯಿ ಬಡಿಯುತ್ತೀಯ" ಅಂತ ಕೇಳಿದೆ. "ನಿಮ್ಮ ದುಡ್ಡನ್ನೆಲ್ಲಾ ಇದರ ಮೇಲೆ ಹಾಕಿದ್ದರಂತೆ. ಅದಕ್ಕೇ ಹೊಡೆಯುತ್ತಿದ್ದೀನಿ" ಅಂತ ಹೇಳಿದಳು. "ನನ್ನ ದುಡ್ಡು ತಿಂದ ಕುದುರೆ ಇದಲ್ಲ. ಈ ಪಾಪೀನ ಯಾಕೆ ಹೊಡೀತೀಯಾ" ಅಂತ ಜೂಜು ಕುದುರೆಗಳ ವಿಚಾರವನ್ನೆಲ್ಲ, ಶೌನಕಾದಿ ಮುನಿಗಳು, ಸೂತ ಪುರಾಣಿಕರಿಗೆ ವಿವರಿಸಿದಂತೆ ವಿವರಿಸಿದೆ.

× × ×

ಕುದುರೆ ಜೂಜಿನಲ್ಲಿ ಹಣ ಬರಲಿ, ಹೋಗಲಿ, ಅದು ಚೆಂದ.

———

# ಎಮ್ಮೆ ಕಟ್ಟಿದ್ದು

ರಾಜಣ್ಣ ಎಂತಹ ಹೆಸರಾಂತ ವಕೀಲನೋ ಅಷ್ಟೇ ಹೆಸರಾಂತ ಲೆಕ್ಕಿಗನೂ ಹೌದು. ಅವನು ಯಾವ ಕೆಲಸ ಕೈಕೊಂಡರೂ ಲೆಕ್ಕದ ಮೇಲೆ. ಮನುಷ್ಯನಿಗೆ ಲೆಕ್ಕ ಚೆನ್ನಾಗಿ ತಿಳಿದಿರಬೇಕು. ಲೆಕ್ಕ ತಿಳಿದವನೇ ಲೆಕ್ಕಾಚಾರಸ್ಥ. ಇದು ರಾಜಣ್ಣನ ಸಿದ್ಧಾಂತ.

ರಾಜಣ್ಣನ ಮನೆಗೆ ತಾಯಮ್ಮ ಹಾಲು ಹಾಕುತ್ತಿದ್ದಳು (ದೊಡ್ಡ ಊರುಗಳಲ್ಲಿ ಏನು ಸಿಕ್ಕರೂ ಸಿಗುತ್ತೆ; ದುಡ್ಡು ಕೊಟ್ಟು ಮೋಕ್ಷವನ್ನಾದರೂ ಪಡೆಯಬಹುದು. ಆದರೆ ಗಟ್ಟಿ ಹಾಲು ಮಾತ್ರ ಏನಾದರೂ ದೊರೆಯುವುದಿಲ್ಲ.) ಗೊತ್ತು ಮಾಡಿದ ದಿನ ಕಳ್ಳಿಯ ಕುಡಿಯಂತಹ ಒಳ್ಳೆಯ ಹಾಲು ತಂದು ಅಳೆಯುತ್ತಾರೆ. ಆದರೆ ಎರಡು ದಿನ ಕಳೆದರೆ ಸಾಕು, ಸುಣ್ಣದ ತಿಳಿಯಂತಹ ಹಾಲನ್ನು ಅಳೆಯಲಾರಂಭಿಸುತ್ತಾರೆ. (ಎದುರಿಗೇ ಕರೆದರೂ ಅದು ಹೇಗೋ ಹಾಲಿನಲ್ಲಿ ಗಂಗಾ ಭಾಗೀರತಿ ಪ್ರತ್ಯಕ್ಷಳಾಗುತ್ತಾಳೆ.) ಈ ಒಂದು ನಿದರ್ಶನದಿಂದ ಎಂತಹ ನಾಸ್ತಿಕನಾದರೂ ಆಸ್ತಿಕನಾಗಬಹುದು.

ತಾಯಮ್ಮ ನೂರಾ ಒಂದನೆಯವಳು. ರಾಜಣ್ಣ ಸುಮಾರು ಒಂದುನೂರು ಜನ ಹಾಲಿನವರನ್ನು ಬದಲಾಯಿಸಿ ಕೊನೆಗೆ ತಾಯಮ್ಮನನ್ನು ಗೊತ್ತುಮಾಡಿದ. ಈಗ ಎರಡು ವರ್ಷಗಳಿಂದ ಅವಳೇ ಅವನ ಮನೆಗೆ ಹಾಲು ಹಾಕುತ್ತಿದ್ದಾಳೆ. ಆಕೆ ಒಳ್ಳೆಯ ಹಾಲು ಕೊಡುತ್ತಿದ್ದರಿಂದ ಇಷ್ಟು ದೀರ್ಘಾವಧಿ ಅವರ ಮನೆ ವರ್ತನೆ ಹಿಡಿದಿದ್ದಳೆಂದು ಅರ್ಥ ಮಾಡಕೂಡದು. ಯಾರನ್ನು ಗೊತ್ತು ಮಾಡಿದರೂ ಅಷ್ಟೆ, ಎಲ್ಲರ ಹಣೆಯ ಬರಹವೂ ಇದೇ ಎಂಬ ಅಂತ್ಯ ನಿರ್ಧಾರಕ್ಕೆ ಅವನು ಬಂದು ಅದೇ ನೀರು ಹಾಲು ತೆಗೆದುಕೊಳ್ಳುತ್ತ ರಾಮಾ ಅಂತ ಇದ್ದ.

ಪ್ರತಿ ತಿಂಗಳೂ ಮೂವತ್ತು ರೂಪಾಯಿ ಹಾಲಿಗೆ ವೆಚ್ಚವಾಗುತ್ತದೆಂಬ ಅಂಶ ರಾಜಣ್ಣನ ಲೆಕ್ಕಾಚಾರದ ಮನಸ್ಸನ್ನು ಕೆರಳಿಸಿತು ಬರೀ ತಾಯಮ್ಮನಿಗೇ ಈ ಎರಡು ವರ್ಷದ ಅವಧಿಯಲ್ಲಿ ಏಳುನೂರಾ ಇಪ್ಪತ್ತು ರೂಪಾಯಿ ತೆತ್ತದ್ದಾಗಿದೆ ಇದಕ್ಕೇನಾದರೂ ಒಂದು ಅಣೆಕಟ್ಟು ಹಾಕಬೇಕು ಎಂದು ನಿರ್ಧರಿಸಿದ.

ರಾಜಣ್ಣ ಅಕಸ್ಮಾತ್ತಾಗಿ ಒಂದು ಕೇಸನ್ನು ಗೆದ್ದ. ಅವನ ವಾದದಿಂದ ಮತ್ತು ಶಕ್ತಿ ಸಾಮರ್ಥ್ಯಗಳಿಂದಲೇ ತಮಗೆ ಗೆಲುವು ದೊರೆಯಿತೆಂದು ಕಕ್ಷಿಗಾರರು ತಿಳಿದಿದ್ದರು. ರಾಜಣ್ಣನಿಗೆ ಸ್ವಲ್ಪ ಹೆಚ್ಚು ರುಸುಮು, ಸಂಭಾವನೆ ಕೊಡಲು ಸಿದ್ಧರಿದ್ದರು. ಅವರಿಗೆ ರಾಜಣ್ಣ ಹೇಳಿದ. "ನನಗೆ ಕೊಡಬೇಕಾದ ಫೀಸನ್ನು ನೀವು ಕೊಡುವಿರಿ, ಹತ್ತು ಹೆಚ್ಚು ಹತ್ತು ಕಡಿಮೆ ಒಂದು ದೊಡ್ಡ ಮಾತಲ್ಲ. ಆದರೆ ನೀವು ಕೊಟ್ಟ ಹಣ ಹೇಗೋ ಖರ್ಚಾಗಿ ಹೋಗುತ್ತೆ. ಆದರೆ ನಿಮ್ಮ ಹೆಸರು ಮಾತ್ರ ಉಳಿಯುವುದಿಲ್ಲ ಒಂದು ಕೆಲಸಮಾಡಿ, ನಿಮ್ಮ ಹೆಸರು ಹೇಳಿ ಒಂದು ಎಮ್ಮೆ ಕಟ್ಟಬೇಕೆಂದಿದ್ದೇನೆ. ಉತ್ತಮವಾದ ರಾಸೊಂದನ್ನು ಕಟ್ಟಿ, ಮಕ್ಕಳು ಮರಿ ನಿಮ್ಮನ್ನು ದಿನವೂ ನೆನಸುತ್ತಾರೆ."

ಕಕ್ಷಿಗಾರ ನಂಜಪ್ಪ ತಟ್ಟನೆ ಹೇಳಿದ. "ಸ್ವಾಮಿ, ಕಡೇಹಳ್ಳಿಯವರು ಮುನ್ನೂರು ರೂಪಾಯಿಗೆ ಕೇಳಿದ ಒಂದು ಜಾತಿ ಎಮ್ಮೆ (ಅಥವಾ ಎಮ್ಮೆ ಜಾತಿಯದು ?) ಇದೆ. ಮನೆಯಲ್ಲಿ ಹುಟ್ಟಿದ ಗೌರಿ (ಈ ಎಮ್ಮೆಯ ಹೆಸರು ಗೌರಿ ಎಂಬುದನ್ನು ಚುರುಕು ಬುದ್ಧಿಯ ರಾಜಣ್ಣ ಆಗಲೇ ಗ್ರಹಿಸಿದ) ಯನ್ನು ಪರರ ಪಾಲು ಮಾಡಲು ನನಗೆ ಮನಸ್ಸಾಗಲಿಲ್ಲ. ನಾನು ನನ್ನ ಮನೆ ಹೆಣ್ಣು ಮಗಳನ್ನು ನೋಡಿಕೊಂಡ ಹಾಗೆ ನೋಡಿಕೋತಾ ಇದೇನೆ. ಗೌರಿಯೂ ನನಗೆ ಅನ್ಯಾಯ ಮಾಡಿಲ್ಲ. ಬೆಳಿಗ್ಗೆ ಎರಡೂವರೆ ಸೇರು, ಸಂಜೆ ಎರಡೂವರೆ ಸೇರು ಕರೆಯುತ್ತಾಳೆ. ನಿಮಗೇನಾದರೂ ಬೇಸರವಾದರೆ ಮಧ್ಯಾಹ್ನ ಸಹ ಎರಡೂವರೆ ಸೇರು ಕರೆಯುತ್ತಾಳೆ. ಮೊನ್ನೆ ನನ್ನ ಹೆಂಡತಿ ಆಸ್ಪತ್ರೆಗೆ ಬಂದಿದ್ದಳು ಅಂತ ಹೇಳಿದ್ದೆನಲ್ಲ, ಯಾಕೆ ಗೊತ್ತೇ ? ಆ ಎಮ್ಮೆ ಹಾಲು

ಕರೆದು ಅವಳ ಬೆಟ್ಟುಗಳು ಉಳುಕಿ ಹೋಗಿದ್ದವು. ಇದೆಲ್ಲಾದಕ್ಕಿಂತ ಈ ಎಮ್ಮೇಲಿ ಇನ್ನೊಂದು ದೊಡ್ಡ ಗುಣಾ ಇದೆ. ಹಸುಮಕ್ಕಳು ಹೋಗಿ ಅದರ ಕೆಚ್ಚಲಿಗೆ ಬಾಯಿ ಹಾಕಿದರೆ ಹರಶಿವ ಅನ್ನೋಲ್ಲ. ನೀವು ನಮಗೆ ಉಪಕಾರ ಮಾಡಿದ್ದೀರಿ. ನಿಮ್ಮ ಋಣ ನನಗೆ ಬೇಡ. ಆ ಎಮ್ಮೆ ತಂದು ನಿಮ್ಮನೇಲಿ ಕಟ್ತೀನೆ. ದೇವರೇ ಪ್ರತ್ಯಕ್ಷವಾಗಿ ಬಂದು ಆ ಎಮ್ಮೆ ಕೇಳಿದ್ದರೆ ಕೊಡುತ್ತಿರಲಿಲ್ಲ ನಿಮಗೋಸ್ಕರ ಕೊಡುತ್ತೇನೆ" ಈ ಮಾತು ಕೇಳಿ ರಾಜಣ್ಣನ ಬಾಯಲ್ಲಿ ಹಾಲೂರಿತು. (ಮಾತು ಎಮ್ಮೆಯ ವಿಷಯಕ್ಕೆ ಸಂಬಂಧಪಟ್ಟಿದ್ದರಿಂದ) "ಸಂಜಪ್ಪಾ, ಎಲ್ಲಾ ನಿನ್ನ ವಿಶ್ವಾಸ," ರಾಜಣ್ಣ ಗಂಭೀರವಾಗಿ ಹೇಳಿದ.

ಶುಭ ಮುಹೂರ್ತದಲ್ಲೊಂದು ದಿನ ಎಮ್ಮೆ ರಾಜಣ್ಣನ ಮನೆಗೆ ಬಂದಿತು. "ಆರತಿ ತೆಗೆದುಕೊಂಡು ಬಾರೇ ಸಾತು, ಗೌರಿ ಬಂದಿದಾಳೆ" ರಾಜಣ್ಣ ಠೀವಿಯಿಂದ ಹೇಳಿದ. ಮನೆಯ ಹಿಂದುಗಡೆ ಇರುವ ಬಚ್ಚಲು ಮನೆ ಪಕ್ಕಕ್ಕೆ ಎರಡು ಕವೆಕೋಲು ನೆಟ್ಟು, ಅದರ ಮೇಲೆ ಎರಡು ತಗಡುಗಳನ್ನು ಹೊದೆಸಿ ಎಮ್ಮೆಗೆ ವಸತಿ ಕಲ್ಪಿಸಿದ್ದಾಯಿತು. ಎಮ್ಮೆ ಹೊಡೆದುಕೊಂಡು ಬಂದ ಹುಡುಗನಿಗೆ ಒಂದು ರೂಪಾಯಿ, ಒಂದು ಹಳೆಯ ಷರ್ಟನ್ನು ಬಕ್ಷೀಸು ಕೊಟ್ಟಿದ್ದೂ ಆಯಿತು.

ಈ ವೇಳೆಗೆ ಎಮ್ಮೆಯ ವಿಷಯವಾಗಿ ಇರುವ ಎಲ್ಲ ಪುಸ್ತಕಗಳನ್ನೂ ರಾಜಣ್ಣ ಓದಿಕೊಂಡಿದ್ದ. ಅವು ಎಂಥೆಂಥ ಆಹಾರ ತಿಂದರೆ ಹಾಲು ಹೆಚ್ಚಾಗಿ ಕೊಡುತ್ತವೆ; ಅವಕ್ಕೆ ಏನೇನು ಕಾಯಿಲೆಗಳು ಬರುತ್ತವೆ ಮತ್ತು ಅವಕ್ಕೆ ಚಿಕಿತ್ಸಾ ವಿಧಾನಗಳು; ಎಮ್ಮೆಯ ಹಾಲು ಕರೆಯುವುದು ಹೇಗೆ ಮುಂತಾದ ಮಹತ್ವಿಚಾರಗಳ ಬಗ್ಗೆ ಒಂದು ಥೀಸಿಸ್ ಬರೆದು ಡಾಕ್ಟರೇಟ್ ಪಡೆಯುವಷ್ಟು ತಜ್ಞತೆ ಪಡೆದಿದ್ದ.

ಸಂಜೆ ತಾಯಮ್ಮ ಹಾಲು ಅಳೆಯಲು ಬಂದಾಗ ರಾಜಣ್ಣ ಠೀವಿಯಿಂದ ಹೇಳಿದ, "ತಾಯಮ್ಮ ಈ ತಿಂಗಳು ಆಖೈರಿಗೆ ನಿನ್ನ ಲೆಕ್ಕವನ್ನೆಲ್ಲಾ ಚುಕ್ತಾ ಮಾಡಿಕೊ. ನೀರು ಹಾಲು ಕುಡಿದು ತಲೆ ಕೆಟ್ಟು ಎಮ್ಮೆ ಕಟ್ಟಿದ್ದೇನೆ. ನೋಡು ಹಿತ್ತಲಕಡೆ ಕಟ್ಟಿದೀವಿ"

ಎಂದು ಹೇಳಿದ. ತಾಯಮ್ಮ ಸೆರಗಿನ ತುದಿಯನ್ನು ಕಚ್ಚಿ (ಏನೂ ತೋಚದಿದ್ದಾಗ ಹೆಂಗಸರು ಹಾಗೆ ಮಾಡುತ್ತಾರಂತೆ) ಎಮ್ಮೆಯನ್ನು ನೋಡಲು ಹಿತ್ತಲಿಗೆ ಹೋದಳು. "ಏನು ಸ್ವಾಮಿ, ಇದಕ್ಕೆ ವಯಸ್ಸೆಷ್ಟು ?" ತಾಯಮ್ಮ ಕೇಳಿದಳು. "ಎಮ್ಮೆ ಕೊಟ್ಟವರು ಅದರ ಜಾತಕಾನ ಕೊಡಲಿಲ್ಲ" ರಾಜಣ್ಣ ಸ್ವಲ್ಪ ಬಿರುಸಾಗಿ ಹೇಳಿದ. ತನ್ನಲ್ಲಿ ಹಾಲು ತೆಗೆದುಕೊಳ್ಳದಿದ್ದಕ್ಕೆ ತಾಯಮ್ಮ ಅಸೂಯೆಯಿಂದ ಇಂಥ ಕಿಡಿಗೇಡಿತನದ ಪ್ರಶ್ನೆ ಹಾಕಿರಬೇಕೆಂದು ರಾಜಣ್ಣನ ಸೂಕ್ಷ್ಮ ಬುದ್ಧಿಗೆ ಹೊಳೆಯದಿರಲಿಲ್ಲ.

ಅಂದು ಸಂಜೆ ಎಮ್ಮೆಯನ್ನು ಕರೆಯಲು ನಂಜಪ್ಪ ಹೇಳಿದ ರೀತ್ಯ ಎರಡೂವರೆ ಸೇರು ಹಾಲು ಹಿಡಿಯುವಷ್ಟು ದೊಡ್ಡ ತಂಬಿಗೆಯನ್ನು ತೆಗೆದುಕೊಂಡು ಸ್ವಯಂ ರಾಜಣ್ಣನೇ ಹೋದ. ಒಂದೂವರೆ ನಿಮಿಷಗಳೊಳಗಾಗಿ ರಾಜಣ್ಣ ತಂಬಿಗೆಯೊಡನೆ ಒಳಕ್ಕೆ ಬಂದ. ಅವನ ಹೆಂಡತಿ ಪ್ರಶ್ನಾರ್ಥಕ ಚಿಹ್ನೆಯ ಮುಖಮುದ್ರೆಯೊಡನೆ ಎದುರಾದಳು. "ತಂಬಿಗೆ ಸಾಕಾಯಿತೆ ?" ಎಂದು ಕೇಳಿದಳು. "ಎರಡು ಹಲ್ಲುಗಳು ಒಂದು ತಂಬಿಗೆ ತುಂಬುತ್ತವೆಯೇ ?" ಪ್ರಶ್ನೆಗೆ ಪ್ರತಿ ಪ್ರಶ್ನೆಯನ್ನೇ ರಾಜಣ್ಣ ಬಿಗಿದ.

"ನಿಮ್ಮ ಒಗಟು ಮಾತು ನನಗೊಂದೂ ಅರ್ಥವಾಗುವುದಿಲ್ಲ, ಏನು ಸಮಾಚಾರ ?"

"ಏನು ಇಲ್ಲ, ಎಮ್ಮೆ ಹಿಂಗಾಲು ಝಾಡಿಸಿತು. ಮುಂದಿನ ಎರಡು ಹಲ್ಲುಗಳು ಉದುರಿ ತಂಬಿಗೆಯಲ್ಲಿ ಬಿದ್ದವು, ಅಷ್ಟೇ !"

"ನೋಡಿ, ಆ ಹಾಳು ನಂಜಪ್ಪ ಹಸುಮಕ್ಕಳು, ಕೆಚ್ಚಲಿಗೆ ಬಾಯಿ ಹಾಕಿದರೆ ಏನೂ ಮಾಡೋದಿಲ್ಲ ಅಂತ ಹೇಳಿದ್ದ. ಏನೋ ನೀವು ಹೋದಿರಿ ಸರಿಯಾಯಿತು. ಸಾತು, ನಾಗಣ್ಣ ಯಾರಾದರೂ ಹೋಗಿದ್ದರೆ ಏನಾಗುತಿತ್ತೋ ?"

"ಸುಮ್ನಿರೆ ಸಾಕು, ನನ್ನ ಹಲ್ಲು ಮುರಿದರೆ ಚಿಂತೆ ಇಲ್ಲ ಅಂತ ನಾನೆ [illegible] ಹೇಳೋದು ?"

ಎಮ್ಮೆ ಹಾಲು ಹಿಂಡದಿದ್ದರೂ ಮನೆಯವರೆಲ್ಲರ ಪ್ರಾಣವನ್ನು ಮಾತ್ರ ಹಿಂಡುತ್ತಿತ್ತು. ಈ ತುಂಟ ಎಮ್ಮೆಯಿಂದ ಹಾಲು ಹೇಗೆ ಕರೆಯಬೇಕೆಂಬುದು ರಾಜಣ್ಣನಿಗೆ ಅತಿ ದೊಡ್ಡ ಸಮಸ್ಯೆಯಾಯಿತು. ಮಾರನೆ ಬೆಳಿಗ್ಗೆ ಹಿಂದಿನ ಎರಡು ಕಾಲುಗಳಿಗೆ ಹಗ್ಗ ಕಟ್ಟಿದ್ದಾಯಿತು. ಎಮ್ಮೆಯ ಎದುರಿಗೆ ಒಂದು ಮೊರ ತವುಡು ಇಟ್ಟಿದ್ದಾಯಿತು. ರಾಜಣ್ಣ ಅರ್ಧ ಪಾವು ಹಾಲು ಹಿಂಡುವುದರೊಳಗೆ ತಾನು ಒಂದೂವರೆ ಪಾವು ಬೆವೆತಿದ್ದ. ಎಮ್ಮೆ ತಿಂಡಿ ತಿನ್ನುವುದರಲ್ಲಿ ತೋರುತ್ತಿದ್ದ ಆಸಕ್ತಿಯನ್ನು ಹಾಲು ಕರೆಯುವುದರಲ್ಲಿ ತೋರುತ್ತಿರಲಿಲ್ಲ. ರಾಜಣ್ಣ ಅನಿವಾರ್ಯ ವಾಗಿ, ಮತ್ತೆ ತಾಯಮ್ಮನಿಗೆ ಶರಣು ಹೋಗಬೇಕಾಯಿತು.

ಎಮ್ಮೆ ಅವರಿವರ ಹೊಲಗಳಿಗೆ ಹೋಗಿ ಲೂಟಿ ಮಾಡಿ ಬರುತ್ತಿದ್ದಿತು. ಅದರ ಮೇಲೆ ಲೆಕ್ಕವಿಲ್ಲದಷ್ಟು ದೂರುಗಳು ಬಂದವು. ವಾರಕ್ಕೆ ಮೂರಾವರ್ತಿ ಅದನ್ನು ದೊಡ್ಡಿಯಿಂದ ಬಿಡಿಸಿಕೊಂಡೂ ಬರಬೇಕಾಗಿತ್ತು. ಎಮ್ಮೆ ತನಗೆ ಹಾಕುತ್ತಿದ್ದ ಆಹಾರವನ್ನಲ್ಲದೆ ಒಂದು ಧರ್ಮಾವರದ ಸೀರೆ, ಒಂದು ಚಡ್ಡಿ, ಮೂರನೆ ಕ್ಲಾಸಿನ ಪುಸ್ತಕ ಇಷ್ಟನ್ನೂ ಅದು ಹೇಗೋ ತಿಂದು ಜೀರ್ಣಿಸಿಕೊಂಡಿತ್ತು.

ರಾಜಣ್ಣನಿಗೆ ದಿಕ್ಕುತೋರದಾಯಿತು. ಮಾರನೆ ದಿನ ತಾಯಮ್ಮ ಬಂದಾಗ ಹೇಳಿದ. "ತಾಯಮ್ಮ, ನಮ್ಮ ಮನೆಯಲ್ಲಿ ಎಮ್ಮೆಯ ಜೋಪಾನ ಅಷ್ಟು ಸರಿಯಾಗಿ ಆಗುತ್ತಿಲ್ಲ, ನಿಮ್ಮ ಮನೆಗೆ ಅದನ್ನು ಹೊಡೆದುಕೊಂಡು ಹೋಗು. ನಮ್ಮ ಮನೆಗೆ ಬೆಳಿಗ್ಗೆ ಒಂದು ಸೇರು, ಸಂಜೆ ಒಂದು ಸೇರು ಹಾಲು ಕೊಡು. ಹೆಚ್ಚಿನ ಹಾಲನ್ನೆಲ್ಲ ನೀನೇ ಮಾರಿಕೋ." ಮೊದಲಿಂದಲೂ ಈ ಎಮ್ಮೆಯ ವಿಷಯದಲ್ಲಿ ಅನುಮಾನ ಇಟ್ಟುಕೊಂಡಿದ್ದ ತಾಯಮ್ಮ ಅನುಮಾನಿಸಿ, ಅನುಮಾನಿಸಿ ಒಪ್ಪಿಕೊಂಡಳು.

ದಿನವೂ ಬೆಳಿಗ್ಗೆ ಆರುಗಂಟೆಗೆ ಬರುತ್ತಿದ್ದ ತಾಯಮ್ಮ ಅಂದು ಒಂಬತ್ತು ಗಂಟೆಗೆ ಬಂದಳು. ಮೊಣಕಾಲು ಚಿಪ್ಪು ತುಂಬಾ ಊದಿಕೊಂಡಿತ್ತು. ರಾಜಣ್ಣ, ಹಾಲು ತಡವಾಗಿ ಬಂದಿದ್ದು, ತಾಯಮ್ಮನ ಮೊಣಕಾಲು ಊದಿದ್ದು-ಎರಡೂ ತಾನು ಕಳಿಸಿದ ಎಮ್ಮೆಗೆ ಸಂಬಂಧ

ಪಟ್ಟಿದ್ದಿರಬೇಕೆಂದು ಊಹಿಸಿದ. ಅವನ ಊಹೆ ಸುಳ್ಳಾಗಿರಲಿಲ್ಲ. ತಾಯಮ್ಮ ಹಾಲು ಹಿಂಡಲು ಹೋದಾಗ ಎಮ್ಮೆ ಪ್ರಸಾದ ಕೊಟ್ಟಿ ತ್ತಂತೆ. "ಸ್ವಾಮಿ, ನಿಮ್ಮ ಎಮ್ಮೆ ಸಹವಾಸ ನನಗೆ ಬೇಡ. ಈ ಸಂಜೆ ನಮ್ಮ ಹುಡುಗ ನಿಮ್ಮ ಮನೆಗೆ ತಂದು ಕಟ್ಟುತ್ತಾನೆ."

ನಂಜಪ್ಪನಿಗೆ ಎಮ್ಮೆಯನ್ನು ಹೊಡೆದು ಕಳುಹಿಸಿ ಅವನು ಹೇಳಿ ದಂತೆ ಮುನ್ನೂರು ರೂಪಾಯಿ ತೆಗೆದುಕೊಂಡರಾಯಿತು, ಅಂತ ರಾಜಣ್ಣ ಲೆಕ್ಕ ಹಾಕಿ ಅವನಿಗೆ ಹೇಳಿ ಕಳುಹಿಸಿದ. ನಂಜಪ್ಪನಿದ್ದ ಹಳ್ಳಿಗೆ ಹೋದ ಮಗ ನಾಗಣ್ಣ ಅವನು ಊರಿನಲ್ಲಿ ಇಲ್ಲವೆಂತಲೂ, ಅವನು ಬರಲು ಹದಿನೈದು ದಿನಗಳು ಬೇಕೆಂತಲೂ ಹೇಳಿದ.

ಈಗ ಕೆರೆ ಅಂಗಳದಲ್ಲೇ ರಾಜಣ್ಣನ ಎಮ್ಮೆ ಇರುತ್ತೆ. ಸಾತು, ನಾಗಣ್ಣ ಸಂಜೆಯಾದ ಕೂಡಲೇ ಅದನ್ನು ಹೊಡೆದುಕೊಂಡು ಬಂದು ಮನೆಯಲ್ಲಿ ಕಟ್ಟುತ್ತಾರೆ. ಹಾಲು ಹಿಂಡುವ ಪ್ರಯತ್ನವನ್ನು ಬಿಟ್ಟಿದ್ದಾಗಿದೆ.

ನಂಜಪ್ಪನಿಗೆ ಹೇಳಿ ಕಳುಹಿಸಿ ಸಾಕಾಯಿತು. ಅವನ ಪತ್ತೆಯೇ ಇಲ್ಲ. ಅದನ್ನು ಮಾರಾಟ ಮಾಡಲು ಪಕ್ಕದ ಊರಿನ ಸಂತೆಗಳಿಗೆ ಹೊಡೆದು ಕಳುಹಿಸಿದ್ದಾಯಿತು. ಅದನ್ನು ಯಾರೂ ಕೇಳಿಯಲಿಲ್ಲ. ಎಮ್ಮೆ ಮಾರಾಟ ಮಾಡಲು ಇಪ್ಪತ್ತೈದು ರೂಪಾಯಿಗಳು ಮೈಮೇಲೆ ಬಂತು ಅಷ್ಟೆ.

ಈ ಎಮ್ಮೆ ದೊಡ್ಡಿಗೆ ಬಿತ್ತು. ಅದನ್ನು ಬಿಡಿಸಿಕೊಳ್ಳುವ ಹವ್ಯಾ ಸಕ್ಕೆ ರಾಜಣ್ಣ ಹೋಗಲಿಲ್ಲ. ಏಳೂವರೆ ರೂಪಾಯಿಗೆ ಹರಾಜಿನಲ್ಲಿ ಅದನ್ನು ಯಾರೋ ಕೊಂಡರಂತೆ.

———

# ಓ ಸಿ ಮಹಾತ್ಮ್ರೆ

## ನಮಃ ಓ ಸಿ ವಾಯ್ !

ಪುರಾತನ ಕವಿಗಳು ಯಾವುದಾದರೂ ಮಹಾ ಕಾವ್ಯ ಆರಂಭಿಸು ವಾಗ, ಸರಸ್ವತಿ, ಗಣಪತಿ ಇವರ ಋಣ ತೀರಿಸುವಂತೆ, " ಓ ಸಿ ಮಹಾತ್ಮ್ಯಂ" ಬರೆಯುವ ಮೊದಲು ಅವರ ಋಣ ತೀರಿಸಿ ಈ ಮಹ ದ್ಕೃತಿಗೆ ಕೈ ಹಚ್ಚುತ್ತೇನೆ.

ಓ ಸಿ ಪಿಡಗು ಮೊದಲು ಬೊಂಬಾಯಿ ಮತ್ತು ಆಚೆ ಮಾತ್ರ ಹಬ್ಬಿತ್ತು. ಆದರೆ ಈಗೀಗ ಅದು ಕೋಳಿ ಕೂಗುವ ಹಳ್ಳಿಯಲ್ಲೂ ತನ್ನ ಬೇರು ಬಿಟ್ಟಿದೆ. ಅದರ ಭಕ್ತಾದಿಗಳ ಸಂಖ್ಯೆ ಕೋಟಿಗಟ್ಟಲೆ ಇದೆ.

ಅಮೆರಿಕದ, ವ್ಯಾಪಾರಕ್ಕೆ ಮುಖ್ಯ ಪಟ್ಟಣವಾದ ನ್ಯೂಯಾರ್ಕ್ ನಗರದಲ್ಲಿ ಹತ್ತಿಯ ಹರಾಜಾಗುತ್ತದೆ. ಈ ಹರಾಜು ಆರಂಭವಾಗುವ ಮುನ್ನ ಹತ್ತಿಯ ಬೆಲೆ ಯಾವುದೋ ಒಂದು ಸಂಖ್ಯೆ ಇರುತ್ತದೆ. ಹರಾಜಿನ ಕೊನೆಯ ಅಂಕೆ ಯಾವುದೋ ಒಂದು ಸಂಖ್ಯೆ ಇರುತ್ತದೆ. ಇದರ ಮೇಲೆ– ಆರು ಸಾವಿರ ಮೈಲಿಗಳಾಚೆ– ದಿನವೂ ಕೋಟ್ಯಂತರ ರೂಪಾಯಿಗಳು ಜೂಜಿನ ರೂಪದಲ್ಲಿ ಕೈಯಿಂದ ಕೈ ಬದಲಾಗುತ್ತದೆ. ಈ ಸಂಖ್ಯೆಯ ವಿವರಣೆ ಸಾಮಾನ್ಯವಾಗಿ ಈ ರೀತಿ ಇರುತ್ತದೆ. ಹರಾ ಜಿನ ಓಪನಿಂಗ್ ೩೩.೫೬. ಹರಾಜಿನ ಕ್ಲೋಸಿಂಗ್ ೩೩ ೬೯. ಓಪನ್ನಿನ ಕೊನೆಯ ಅಂಕೆ ೬ ಮತ್ತು ಕ್ಲೋಸಿಂಗಿನ ಕೊನೆಯ ಅಂಕೆ ೯– ಕರಾರುವಾಕ್ಕಾಗಿ ಹೇಳಿದರೆ, ಇದರ ಮೇಲೆ ತಾವು ಎಷ್ಟು ಹಣ ಕಟ್ಟಿರುತ್ತಾರೋ ಅದಕ್ಕೆ ೬೪ ರಷ್ಟು ಹಣ ಕೊಡುತ್ತಾರೆ. ಓಪನಿಂಗ್ ಅಥವಾ ಕ್ಲೋಸಿಂಗ್ ಒಂದರ ಮೇಲೆಯೋ ಆಡಿ, ಅದು ಕರಾರು ವಾಕ್ಕಾದರೆ ಒಂದಕ್ಕೆ ೮ ರಷ್ಟನ್ನು ಕೊಡುತ್ತಾರೆ.

ಕುದುರೆ ಜೂಜು, ಇಸ್ಪೀಟು ಮುಂತಾದ ಜೂಜುಗಳಿಗೂ ಓ ಸಿ ಗೂ ಅಜಗಜಾಂತರವಿದೆ. ನಾವು ಆರಿಸಿದ ಕುದುರೆಯ ಅಪ್ಪ, ಅಮ್ಮ, ಅದು ಮಾಡಿದ ಟ್ರ್ಯಾಕ್, ಓಡುವ ದಿನಕ್ಕೆ ಹಾಕಿರುವ ತೂಕ ಮುಂತಾದ ಕೆಲ ಕುರುಹುಗಳಿರುತ್ತವೆ. ಅದರಂತೆ ಇಸ್ಪೀಟ್ ಆಟದಲ್ಲಿ ನಮಗೆ ಬಿದ್ದಿರುವ ಎಲೆಗಳ ಬಲಾಬಲ, ಆಟಗಾರರ ದಡ್ಡತನ, ನಮ್ಮ ಬುದ್ಧಿವಂತಿಗೆ, ಇವುಗಳ ಆಧಾರದ ಮೇಲೆ ಆಡುತ್ತೇವೆ. ಆದರೆ ಓ ಸಿ ಜೂಜಿಗೆ, ಜೂಜುಗಾರನ ಅದೃಷ್ಟ ರೇಖೆಯ ವಿನಾ ಮತ್ತಾವುದೂ ಇಲ್ಲ. ಆದರೆ ಇದಕ್ಕೂ ಕುರುಹುಗಳಿವೆಯೆಂದು ವಾದಿಸುವ ಪುಣ್ಯಾತ್ಮರಿರುವರಲ್ಲದೆ, ಅವನ್ನು ಚಾಚು ತಪ್ಪದಂತೆ ಅನುಸರಿಸುವವರೂ ಇದ್ದಾರೆ.

ಆರು ಸಾವಿರಮೈಲಿಗಳಾಚೆ ಆಗುವ ಹತ್ತಿಯ ಹರಾಜಿನ ಬಗ್ಗೆ ಕುರುಹುಗಳನ್ನು ಹುಡುಕುವುದು ಹೇಗೆ ಸಾಧ್ಯ? ಎಂಬ ಅತ್ಯಂತ ಸಾಮಾನ್ಯಪ್ರಶ್ನೆ ಉದ್ಭಾತವಾಗುವುದು ಸಹಜ. ಹೇಳಿ ಕೇಳಿ ಮೊದಲೇ ಹರಾಜು, ಹುಚ್ಚನ ಕೈಯಲ್ಲಿರುವ ಕಲ್ಲಿನಂತೆ ಎಲ್ಲಿ ಬಿದ್ದರೂ ಬೀಳಬಹುದು. ಪೈಪೋಟಿಯಿಂದ ಧಾರಣೆ ಏರಬಹುದು. ನಾಲ್ಕು ಜನ ಮಾತನಾಡಿಕೊಂಡರೆ ಕಡಿಮೆ ಆಗಬಹುದು. ಇದೆಲ್ಲಕ್ಕಿಂತ ಒಟ್ಟು ಬೆಲೆಯನ್ನೇ ಬದಿಗೊತ್ತಿ, ಓಪನಿಂಗ್ ಮತ್ತು ಕ್ಲೋಸಿಂಗಿನ ಕೊನೆಯ ಎರಡು ಅಂಕೆಗಳ ಮೇಲೆ ಪಂದ್ಯಕಟ್ಟುವುದು ಅತ್ಯಂತ ವಿಚಿತ್ರವಾಗಿದೆ. ಈ ಜೂಜನ್ನು ಕಂಡು ಹಿಡಿದ ಮಹಾತ್ಮನಿಗೆ ನೋಬೆಲ್ ಪಾರಿತೋಷಕ ಕೊಡಿಸಲು ಸಾರ್ವಜನಿಕರೆಲ್ಲ ಸೇರಿ ಪ್ರಯತ್ನಿಸಬೇಕೆಂದು ಈ ಮೂಲಕ ಸೂಚಿಸಬಯಸುತ್ತೇನೆ. ನಾನು ಈ ಮುಂಚೆ ಹೇಳಿದಂತೆ ಈ ವಿಚಿತ್ರ ಜೂಜಿಗೆ ಯಾವ ರೀತಿ ಕುರುಹುಗಳನ್ನು ಹುಡುಕುತ್ತಾರೆಂಬುದನ್ನು ವಿವರಿಸುತ್ತೇನೆ.

ಬೆಳಿಗ್ಗೆ ಎದ್ದು ಹೊರ ಬಂದ ಕೂಡಲೇ ಕಣ್ಣಿಗೆ ಬೀಳುವ ಮೊಟ್ಟಮೊದಲನೆಯ ಜಟಕಾ ಅಥವಾ ಮೋಟಾರ್ ನಂಬರ್‌ಗಳ ಆಧಾರದ

ಮೇಲೆ ಕೆಲವರು ಓಸಿ ಪಂದ್ಯ ಕಟ್ಟುತ್ತಾರೆ. ಅವರು ನೋಡಿದ ಮೋಟಾರ್ ಕಾರ್ ನಂಬರ್ ೪೯೫೮ ಇದ್ದಲ್ಲಿ ಓಪನ್ ೪, ಕ್ಲೋಸ್ ೮. ಅಕಸ್ಮಾತ್ತಾಗಿ ಕಾಕತಾಳೀನ್ಯಾಯ ರೀತ್ಯ ಈ ಅಂಕೆ ಓಸಿಗೆ ಸರಿಹೋಗಿ ಅವನಿಗೇನಾದರೂ ಹಣ ಬಂದರೆ ಅವನ ದೇಹದಲ್ಲಿ ಪ್ರಾಣ ವಾಯು ಇರುವವರೆಗೂ ಇದೇ ಪದ್ಧತಿಯ ಮೇಲೆ ಪಂದ್ಯ ಕಟ್ಟುತ್ತಲೇ ಇರುತ್ತಾನೆ.

ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಪ್ರಕಟವಾಗುವ ಆರ್. ಕೆ. ಲಕ್ಷ್ಮಣ್‌ರವರ ವ್ಯಂಗ ಚಿತ್ರಗಳು, ಮದ್ರಾಸ್ ಮೇಲ್ ಪತ್ರಿಕೆ ಯಲ್ಲಿ ಬರುವ ಕರ್ಲಿವೀ ಚಿತ್ರಗಳು, ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ ಯಲ್ಲಿ ಬರುವ ಚುಂಚೋ ಮತ್ತು ಮಾಟಗಾರ ಮ್ಯಾಂಡ್ರೇಕ್ ಚಿತ್ರ ಗಳು—ಇವೆಲ್ಲಾ ಓಸಿ ಜೂಜಿಗೆ ಆಧಾರವಾಗಿವೆ. ಈ ಚಿತ್ರಗಳಲ್ಲಿನ ಯಾವುದಾದರೂ ಒಂದು ಬೊಂಬೆ ಕೈ ಮೇಲಕ್ಕೆತ್ತಿ ಎರಡು ಬೆರಳು ಗಳನ್ನು ತೋರಿಸಿದರೆ ಅಂದಿನ ಓಪನಿಂಗ್ ಎರಡು ಮತ್ತು ಈ ಚಿತ್ರ ಗಳಲ್ಲಿನ ಅಂತರಾರ್ಥವನ್ನು (ಓಸಿ ರೀತ್ಯ) ವ್ಯಾಖ್ಯಾನ ಮಾಡುವುದಕ್ಕೂ ಒಂದು ತರಹೆ ಮೇಧಾಶಕ್ತಿ ಬೇಕು. ಇದು ಎಲ್ಲರಿಗೂ ಸುಲಭ ಸಾಧ್ಯವಲ್ಲ. ಆದರೂ ಕೆಲವರು ಈ ಚಿತ್ರಗಳನ್ನು ಯಾವ ರೀತಿ ವ್ಯಾಖ್ಯಾನ ಮಾಡುತ್ತಾರೆಂಬುದನ್ನು ತಿಳಿಸಲಿಚ್ಛಿಸುತ್ತೇನೆ. ಚಿತ್ರ ದಲ್ಲಿನ ಬೊಂಬೆಯೊಂದು ತೋಳು ಮಡಿಸಿದ್ದರೆ ಅದು ೭. ಒಬ್ಬನ ಅಂಗಿಗೆ ಮೂರು ಗುಂಡಿಗಳಿದ್ದರೆ ೩. ಮತ್ತು ಚಿತ್ರದಲ್ಲಿ ಕಾಣುವ ಚುಕ್ಕೆಗಳನ್ನೂ ಲೆಕ್ಕ ಹಾಕಿ ಅದರ ಆಧಾರದ ಮೇಲೆ ಆಡುತ್ತಾರೆ.

ಹರಾಜಿನ ದಿನ ಮಾರ್ಕೆಟ್ಟಿನ ಪರಿಸ್ಥಿತಿಯನ್ನು ಸಹ ಗಮನಕ್ಕೆ ತೆಗೆದುಕೊಳ್ಳಲೇಬೇಕು. ಮಾರ್ಕೆಟ್ಟಿನ ಪರಿಸ್ಥಿತಿ ಮೂರು ಬಗೆಯಾಗಿ ರುತ್ತದೆ. ಸ್ಟೆಡಿ, ರೈಜ್ ಮತ್ತು ಡೌನ್. ಈ ವ್ಯಂಗ ಚಿತ್ರಗಳಲ್ಲಿನ ಬೊಂಬೆ ನೇರವಾಗಿ ನಿಂತಿದ್ದರೆ ಅಂದಿನ ಮಾರ್ಕೆಟ್ ಸ್ಟೆಡಿ, ಯಾರ ನ್ನಾದರೂ ಕರೆಯಲು ಕೈ ಮೇಲೆತ್ತಿದ್ದರೆ ರೈಜ್, ಯಾವನಾದರೂ ತಲೆ [illegible]ದ್ದರೆ ಡೌನ್ ಅಂತ ಅರ್ಥ ಮಾಡುತ್ತಾರೆ.

ಪತ್ರಿಕೆಗಳಲ್ಲಿ ಪ್ರಕಟವಾಗುವ ಜಾಹಿರಾತುಗಳ ಆಧಾರದ ಮೇಲೆಯೂ ಓಸಿ ಪಂದ್ಯ ಕಟ್ಟುತ್ತಾರೆ. ಪತ್ರಿಕೆಯ ಮುಖಪಟದಲ್ಲಿ ವಜ್ರದ ಉಂಗುರದ ಜಾಹಿರಾತು ಕೊಟ್ಟಿರುತ್ತಾರೆಂದು ತಿಳಿಯೋಣ. ಇದು ೮೦. ಹೇಗೆಂದರೆ ವಜ್ರಕ್ಕೆ ಎಂಟು ಮೂಲೆಗಳಿರುತ್ತವೆ, ಅದು ೮, ಉಂಗುರ ಎಂದರೆ ೦. ಇದರಂತೆ ಬೇರೆ ಬೇರೆ ಜಾಹಿರಾತುಗಳನ್ನೂ ಅವರವರ ಸಿದ್ಧಾಂತ ಮತ್ತು ಬುದ್ಧಿಮತ್ತೆಗನುಸಾರವಾಗಿ ವ್ಯಾಖ್ಯಾನ ಮಾಡುತ್ತಾರೆ.

ಸ್ವಪ್ನಸಾದೃಶರೀತ್ಯಾ ಓಸಿಯ ನಂಬರುಗಳ ಮೇಲೆ ಪಂದ್ಯ ಕಟ್ಟುತ್ತಾರೆ. ಸ್ವಪ್ನದಲ್ಲಿ ನೀರನ್ನು ಕಂಡರೆ ೦ ನಂಬರೆಂದು ಓಸಿ ಭಕ್ತರಲ್ಲಿ ಒಂದು ತೀರ್ಮಾನವಿದೆ. ಈ ಪದಾರ್ಥಗಳಿಗೆ ಈ ನಂಬರುಗಳು ಹೇಗೆ ಬಂದವೆಂಬುದರ ಬಗ್ಗೆ ನಾನಿನ್ನೂ ಸಂಶೋಧನೆ ನಡೆಸುತ್ತಲೇ ಇದ್ದೇನೆ. ಹಿಂದಿನ ರಾತ್ರಿ ಸ್ವಪ್ನದಲ್ಲಿ ಈ ಕೆಳಗೆ ಕಂಡವುಗಳನ್ನು ಕಂಡರೆ ಸಾಮಾನ್ಯವಾಗಿ ಈ ನಂಬರುಗಳ ಮೇಲೆ ಆಡುತ್ತಾರೆ. ನೀರು ೦, ಆನೆ ೯, ಕೋತಿ ೧-೨, ಗಾಡಿ ೪, ಮುತ್ತೈದೆ ೫, ವಿಧವೆ ೯, ಕುದುರೆ ೭, ತೆಂಗಿನಕಾಯಿ ೮, ಒಡೆದಕಾಯಿ ೮ ೨, ದೇವರು ೮, ಬ್ರಾಹ್ಮಣ ೮, ಮತ್ತು ಹೆಣ್ಣು ಮಗು ೩.

ಕೆಲವರು ಬೆಳಿಗ್ಗೆ ಎದ್ದು ಹೊರಕ್ಕೆ ಬಂದಾಗ ಮೊಸರಿನ ಗಡಿಗೆ, ಹಾಲಿನ ಡಬ್ಬ ಇವುಗಳು ಎದುರಿಗೆ ಬಂದರೆ—ಇವಕ್ಕೆ ಅವರು ಕೆಲವು ಸಂಖ್ಯೆಗಳನ್ನು ಇಟ್ಟುಕೊಂಡಿರುತ್ತಾರೆ—ಇವುಗಳ ಆಧಾರದ ಮೇಲೆ ಪಂದ್ಯ ಕಟ್ಟುತ್ತಾರೆ.

ಓಸಿ ದಿನವೂ ಆಡಬಹುದಾದ ಜೂಜಾದ್ದರಿಂದ ಇದಕ್ಕೆ ನಿತ್ಯ ಶ್ರಾದ್ಧವೆಂದು ಕರೆಯುತ್ತಾರೆ. ಕುದುರೆ ಜೂಜು ವರ್ಷಕ್ಕೊಂದು ಬಾರಿ ನಡೆಯುವದಾದ್ದರಿಂದ ಅದು ವರ್ಷಾಬ್ಧಿಯಂತೆ.

ನಮ್ಮ ದೇಶದಲ್ಲಿ ಇಂಗ್ಲೀಷ್ ಪತ್ರಿಕೆಗಳ ಪ್ರಚಾರ ಹೆಚ್ಚಾಗುತ್ತಿರುವುದಕ್ಕೆ ಓಸಿಯೂ ಕಾರಣವಾಗಿದೆ. ಸರಸ್ವತಿಯ ಪರಮ

ಶತ್ರುವೂ, ಇಂಗ್ಲೀಷಿನ ಗಂಧಗಾಳಿಯಿಲ್ಲದವನೂ ಟೈಮ್ಸ್ ಆಫ್ ಇಂಡಿಯಾ, ಮದ್ರಾಸ್ ಮೆಯಿಲ್, ಇಂಡಿಯನ್ ಎಕ್ಸ್‌ಪ್ರೆಸ್ ಮುಂತಾದ ಪತ್ರಿಕೆಗಳನ್ನು ಕೊಳ್ಳುತ್ತಾನೆ. ಅದರಲ್ಲಿರುವ ವ್ಯಂಗ ಚಿತ್ರ, ಜಾಹಿರಾತುಗಳನ್ನು ಗಂಟೆಗಟ್ಟಲೆ ನೋಡಿ ಓಸಿ ನಂಬರನ್ನು ಪತ್ತೆ ಹಚ್ಚಿ ಪಂದ್ಯ ಕಟ್ಟುತ್ತಾನೆ.

ಓಸಿ ದೇವಿಯ ಆರಾಧನೆಯು "ಅಣೋರಣೀಯನಾ ಮಹತೋ ಮಹಿಮನಾ" ಎಂಬಂತೆ ಒಂದಾಣೆಯಿಂದ ಹಿಡಿದು ಸಹಸ್ರಾರು ರೂಪಾಯಿಗಳವರೆಗೂ ನಡೆಯುತ್ತದೆ. ಇದರ ಫಲಿತಾಂಶಕ್ಕಾಗಿ ಚಾತಕ ಪಕ್ಷಿಗಳಂತೆ ಕಾದಿರುತ್ತಾರೆ. ಕೆಲಸಗಾರರು, ವ್ಯಾಪಾರಸ್ಥರು, ನೌಕರರು, ಶ್ರೀಮಂತರು ಎಲ್ಲರೂ ಓಸಿ ಭಕ್ತರೇ.

ಸರ್ಕಾರ ಓಸಿಯನ್ನು ಬಹಿಷ್ಕರಿಸಿದೆ. ಜೂಜಾಡುವವರಿಗೆ ಮತ್ತು ಜೂಜಾಟ ನಡೆಸುವವರಿಗೆ ಇಂತಿಂಥ ಶಿಕ್ಷೆಯೆಂದೂ ವಿಧಾಯಕವಾಗಿದೆ. ಆದರೆ ಸರ್ಕಾರ ಹೊಸಿಲು ಕೆಳಗೆ ತೂರಿದರೆ, ಚಾಪೆ, ರಂಗವಲ್ಲಿಗಳ ಮಧ್ಯ ತೂರುವ ಓಸಿ ಭಕ್ತರಿದ್ದಾರೆ.



# "ಸರ್ವಂ ಸೀಟ ಮಯಂ ಜಗತ್"

ಇಂದಿನ ಮನ್ವಂತರವನ್ನು ಆಟಂ ಯುಗವೆಂತಲೂ, ಕಂಟ್ರೋಲ್ ಯುಗವೆಂತಲೂ ನಾನಾ ಹೆಸರುಗಳಿಂದ ಕರೆಯುತ್ತಾರೆ. ನಿಜಕ್ಕೂ ಇದು ಸೀಟಿನ ಯುಗ, "ಸರ್ವಂ ಸೀಟ ಮಯಂ ಜಗತ್." ಬಸ್ಸಿಗೆ ಹೋಗಿ, ರೈಲಿಗೆ ಹೋಗಿ, ಸಿನಿಮಾಕ್ಕೆ ಹೋಗಿ, ಎಲ್ಲೂ ಸೀಟ್ ಸಿಕ್ಕುವುದಿಲ್ಲ. ಬಸ್ಸಿನಲ್ಲಿ ಕಬ್ಬಿಣದ ಸಲಾಕೆಗಳನ್ನು ಹಿಡಿದುಕೊಂಡು-ಯಾವುದೋ ಒಂದು ತರಹೆ ಶಿಕ್ಷೆ ವಿಧಿಸಲ್ಪಟ್ಟವರಂತೆ ನಿಂತಿರಬೇಕು. ಇದಕ್ಕೆ ಸ್ಟ್ಯಾಂಡಿಂಗ್ ಸೀಟ್ ಅಂತ ಹೆಸರು ! ಹೀಗೆ ನಿಲ್ಲುವುದಕ್ಕೂ ಕಂಡಕ್ಟರ್ ಮಹಾಶಯನಿಗೆ ಸಲಾಮು ಹಾಕಬೇಕು. ಬಸ್ಸು ಅತಿ ಚಿಕ್ಕದಾದ 'ಏರಿಂಡ್'ಗಳನ್ನು ಪ್ರದಕ್ಷಿಣೆ ಮಾಡುವಾಗ, ನಿಂತಿರುವ ಪ್ರಯಾಣಿಕನು ಭರತನಾಟ್ಯದಲ್ಲಿ ವಿವರಿಸಿರುವ ಎಲ್ಲ ಅಂಗ ಭಂಗಿ ಗಳನ್ನು ಮಾಡುತ್ತಿರಬೇಕಾಗುತ್ತದೆ ರೈಲಿನ ಸಮಾಚಾರವಂತೂ ಎಲ್ಲರಿಗೂ ಗೊತ್ತೇ ಇದೆ. ಇದನ್ನು "ಪ್ರವಾಸ" ಎನ್ನುವುದಕ್ಕೆ ಬದ ಲಾಗಿ "ಪ್ರಸವ" ಅಂತ ಕರೆಯಬಹುದು. ಅಮೆರಿಕ, ಇಂಗ್ಲೆಂಡ್ ಮುಂತಾದ ಕಡೆಗಳಲ್ಲಿ ವಿಮಾನದಲ್ಲಿ ಪ್ರಯಾಣ ಮಾಡುವ ಮುನ್ನ ಪ್ರಯಾಣಿಕರಿಗೆ ವಿಮೆ ಇಳಿಸುತ್ತಾರೆ. ನಮ್ಮ ದೇಶದಲ್ಲಿ ರೈಲಿನಲ್ಲಿ ಪ್ರಯಾಣ ಮಾಡುವವರ ಮೇಲೂ ವಿಮೆ ಇಳಿಸಿದರೆ ಒಳ್ಳೆಯದು. ೨೦೦ ಮೈಲಿ ದೂರ ಮೂರನೆ ತರಗತಿ ಗಾಡಿಯಲ್ಲಿ ಪ್ರಯಾಣ ಮಾಡಿ ದವನೊಬ್ಬನಿಗೆ "ವೀರಚಕ್ರ" ಪ್ರಶಸ್ತಿ ಕೊಟ್ಟರೆಂದು ಪತ್ರಿಕೆಯಲ್ಲಿ ಬಂದಿದೆಯೆಂದು ಯಾರೋ ಹೇಳಿದರು. ಇದ್ದರೂ ಇರಬಾರದೇಕೆ ?

ತಮಿಳು ಚಿತ್ರಗಳು ಸಿನಿಮಾ ಮಂದಿರಗಳಿಗೆ ಬಂದರೆ ದೀಪಾ ವಳಿಗೆ ಅಳಿಯ ಬಂದಂತೆ-ಜಾಗ್ರತೆ ಹೋಗುವುದೇ ಇಲ್ಲ. ಅದೂ ಒಂದೇ ಚಿತ್ರ ಅನೇಕ ಚಿತ್ರಮಂದಿರಗಳಲ್ಲಿ ನಡೆಯುತ್ತಿರುತ್ತದೆ.

ಮಧ್ಯಾಹ್ನ "ಮ್ಯೂಟಿನಿ" (ಮ್ಯಾಟಿನಿಯ ಅಪಭ್ರಂಶ) ಆಟವು ೩-೩೦ ಕ್ಕೆ ಆರಂಭವಾಗುವದಿದ್ದರೂ ೧೧ ಗಂಟೆಗೆ ಮನೆಯಲ್ಲಿ ಊಟ ಮುಗಿಸಿ ಟಿಕೀಟು ಕೊಡುವ ಕಿಟಕಿಯ ಬಳಿ ಮಲಗುವ ಭೂಪರೂ ಇದ್ದಾರೆ. ಜಾಗ್ರತೆ ಬಂದರೆ ಹೊತ್ತು ಹೋಗುವದಿಲ್ಲವೆಂದು ಕಥೆ ಕಾದಂಬರಿ ಪುಸ್ತಕಗಳನ್ನು ತಂದಿರುತ್ತಾರೆ. ಚಿತ್ರವು ೬-೮ ವಾರ ಗಳು ನಡೆದಿದ್ದರೂ ಸೀಟ್ ಸಿಕ್ಕುವುದಿಲ್ಲ ಇಷ್ಟು ಜನ ಯಾವ ಲೋಕದಿಂದ ಬಂದಿರುತ್ತಾರೋ ಎಂದೆನಿಸುತ್ತದೆ.

ಹೋಟಲುಗಳಲ್ಲಿ ಸಹ ಇದೇ ಹಾಡೇ. ತಿಂಡಿ ತಿಂದು ಕಾಫಿ ಕುಡಿಯುತ್ತಿರುವವರ ಕುರ್ಚಿಯ ಹಿಂದೆ ಜಾತಕ ಪಕ್ಷಿಯಂತೆ ಕಾದು ನಿಂತಿರಬೇಕು. ಅವನು ನಾವು ನಿಂತಿರುವುದನ್ನು ನೋಡಿ ಕಾಫಿ ಯನ್ನು ಜಾಗ್ರತೆಯಾಗಿ ಹೀರದೆ ನಿಧಾನವಾಗಿ ಕುಡಿಯುತ್ತಾನೆ. ನಮ್ಮನ್ನು ಹಾಗೆ ನಿಲ್ಲಿಸಿ, ಕಾಯಿಸಿ, ತೊಂದರೆಪಡಿಸುತ್ತಿದ್ದೇನೆಂದು ಮೀಸೆಯ ತುದಿಯಲ್ಲಿಯೇ ನಗುತ್ತಿರುತ್ತಾನೆ. ಇಷ್ಟೆಲ್ಲ ತೊಂದರೆ ಅನುಭವಿಸಿ ಕುರ್ಚಿಯಲ್ಲಿ ಕುಳಿತು ಅರ್ಧಗಂಟೆಯಾದ ಮೇಲೆ ಉಡು ಪಿಯ ಶ್ರೀಕೃಷ್ಣ ಪ್ರತ್ಯಕ್ಷನಾಗಿ "ನಿಮಗೇನು ಬೇಕು" ಎಂದು ವರ ಕೇಳುತ್ತಾನೆ. ಸರಿ, ಯಾವುದೋ ತಿಂಡಿಯ ಹೆಸರು ಹೇಳಿದ ಕೂಡಲೇ ಸಿನಿಮಾದಲ್ಲಿ ಈಶ್ವರ ಅಂತರ್ಧಾನನಾಗುವಂತೆ ಮಾಯ ವಾಗಿ, ಹತ್ತು ನಿಮಿಷವಾದ ಮೇಲೆ "ಅದು ಮುಗಿದು ಹೋಗಿದೆ ಮತ್ತೇನು ಬೇಕು" ಎಂದು ಕೇಳುತ್ತಾನೆ. ಸರಿ, ನಾವು ಹೇಳಿದ ತಿಂಡಿ ಎಲ್ಲಿ ಇಲ್ಲ ಎಂದು ಹೇಳುತ್ತಾನೋ ಎಂಬ ದಿಗಿಲಿನಿಂದ ಹಿಂದಿನ ವಾರ ತಯಾರಿಸಿ ಬೀರುವಿನಲ್ಲಿಟ್ಟಿದ್ದ ತಿಂಡಿಗೆ ಆರ್ಡರ್ ಕೊಡುತ್ತೇವೆ. ಈ ವೇಳೆಗೆ ನಮ್ಮ ಹಿಂದೆ ನಮ್ಮ ಕುರ್ಚಿಗಾಗಿ ಯಮದೂತರಂತೆ ಇಬ್ಬರು ನಿಂತಿರುತ್ತಾರೆ.

ಹೋಟಲು, ಸಿನಿಮಾ, ಇವೆಲ್ಲಾ ಮನರಂಜನೆಯ ವಿಷಯ ವಾಯಿತು. ಆಸ್ಪತ್ರೆಗಳಲ್ಲೂ ಸೀಟಿನ ಅಭಾವ ಅತಿ ಹೆಚ್ಚಾಗಿದೆ.

ಯಾವ ಆಸ್ಪತ್ರೆಗೆ ಹೋದರೂ ಜನ ಕ್ಯೂ ನಿಂತಿರುತ್ತಾರೆ. ರೋಗ ಗಳು ಹೆಚ್ಚಾಗಿವೆಯೋ, ರೋಗಿಗಳು ಹೆಚ್ಚಾಗಿದ್ದಾರೋ ತಿಳಿಯದು. ಇದೊಂದು "ಬೀಜ ವೃಕ್ಷ ನ್ಯಾಯ" ಅಲ್ಲದೆ ಆಸ್ಪತ್ರೆಗೆ ಹೋಗು ವುದೇ ಒಂದು ಫ್ಯಾಷನ್ ಆಗಿದೆ. ಹೊಸದಾಗಿ ಉಲ್ಲನ್ ಸೂಟು ಹೊಲಿಸಿಕೊಂಡವರು ಹೇಳುವಂತೆ, "ನನಗೆ ಟಾನ್ಸಲ್ಸ್ ಆಪರೇ ಷನ್ ಆಗಿದೆ" "ಅಪೆಂಡಿಸೈಟ್ಸ್ ಆಪರೇಷನ್ ಆಗಿದೆ." ಎಂದು ಹೇಳಿಕೊಳ್ಳುತ್ತಿರುತ್ತಾರೆ. ಅನಿಮಿಯಾ (ರಕ್ತಾಭಾವ) ಕಾಯಿಲೆ ಯಂತೂ ಇಲ್ಲದವರೇ ಇಲ್ಲ. ಅನಿಮಿಯಾಕ್ಕೆ ಹೋಲುವ ಇನ್ನೊಂದು ಕಾಯಿಲೆ ಇದೆ. ಇದರ ಹೆಸರು ಸಿನಿಮಿಯಾ ! ಸಿನಿಮಾ ನೋಡುವ ಹುಚ್ಚು ಇರುವವರಲ್ಲಿ ಈ ಕಾಯಿಲೆ ಇರುತ್ತದಂತೆ. ಈಗ ಹೊಸ ದಾಗಿ ಇನ್ನೊಂದು ಸರ್ವರೋಗ ಸಂಜೀವಿನಿ ಹುಟ್ಟಿಕೊಂಡಿದೆ. ಅದೇ ಪೆನ್ಸಿಲಿನ್, ಯಾರನ್ನು ಕೇಳಿದರೂ ಲಕ್ಷ ತೆಗೆದುಕೊಂಡೆ, ಎರಡು ಲಕ್ಷ ತೆಗೆದುಕೊಂಡೆ, ಎಂದು ಹೇಳುತ್ತಾರೆ. ಪೆನ್ಸಿಲಿನ್ ವಾಸಿ ಮಾಡದ ಕಾಯಿಲೆಯೇ ಇಲ್ಲವಂತೆ. ಮೊನ್ನೆ ಮಾರ್ಚಿ ಪರೀಕ್ಷೆಯಲ್ಲಿ ಇಂಟರ್ ಪರೀಕ್ಷೆಗೆ ಕೂತಿದ್ದ. ಎಲ್ಲರಿಗೂ ಅವನ ವಿಷಯವಾಗಿ ನಂಬಿಕೆ ಇದ್ದಿತು, ಅವನು ಖಂಡಿತ ಫೇಲಾಗುವನೆಂದು. ಆದರೆ ಆ ಹುಡುಗ ಪೆನ್ಸಿಲಿನ್ ಇಂಜಕ್ಷನ್ ತೆಗೆದುಕೊಂಡಿದ್ದರಿಂದ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿದನಂತೆ. ಹುಚ್ಚಾಸ್ಪತ್ರೆಯಲ್ಲೂ ಈಗ ಸ್ಥಳಾಭಾವವಂತೆ. ಮನೆಗಳ ಅಭಾವದಿಂದ ಜನಗಳು ಅಲ್ಲಿಗೆ ನುಗ್ಗು ತ್ತಿದ್ದರೆಂದು ನಂಬಲರ್ಹವಾದ ಕಡೆಗಳಿಂದ ತಿಳಿದು ಬಂದಿದೆ.

ಜೈಲುಗಳಲ್ಲಿ ಸಹ ಈಚೆಗೆ ಸೀಟಿನ ಅಭಾವ ಹೆಚ್ಚಾಗಿದೆ. ಸೀಟಿದರೆ ಕೆಮ್ಮಿದರೆ ಜನಗಳು ಸತ್ಯಾಗ್ರಹ ಹೂಡುತ್ತಾರೆ. ಕೆಲವು ಗಂಟೆಗಳವರೆಗಾದರೂ ನಿರಶನ ಮಾಡುತ್ತಾರೆ. ಹುಣಿಸೆಹಣ್ಣು, ಮೆಣ ಸಿನ ಕಾಯಿಗಳಿಗಾಗಿ ಸತ್ಯಾಗ್ರಹ ಹೂಡಿದವರೂ ಇದ್ದಾರೆ. ಕಳ್ಳ ~ತನನ್ನೇ ಕೆಲವರು ಗೃಹ ಕೈಗಾರಿಕೆಯಾಗಿಟ್ಟುಕೊಂಡಿದ್ದಾರೆ. -. ್'ದಯ ಸಮಾಜ ತತ್ವದ ರೀತ್ಯ ಅತಿ ಮುಖ್ಯವಾದ "ಸ್ವಾವ

ಲ್ರಂಬನ"ಕ್ಕಾಗಿ ಅನೇಕರು ಚೋರವೃತ್ತಿಯನ್ನು ಕೈಕೊಂಡಿದ್ದಾರೆ. ಈಗ್ಗೆ ಕೆಲವು ದಿನಗಳ ಹಿಂದೆ ಜೀವಾವಧಿ ಶಿಕ್ಷೆಗೆ ಗುರಿಯಾಗಿದ್ದ ಒಬ್ಬ ನನ್ನು-ಅವನ ಸದ್ವರ್ತನೆಯನ್ನು ಗಮನಿಸಿ-ಜೈಲಿನ ಅಧಿಕಾರಿಗಳು ಕೊಂಚ ಮುಂಚೆ ಬಿಡುಗಡೆ ಮಾಡಿದರು. ಕೆಲ ದಿನಗಳಾದ ಮೇಲೆ ಆತ ಅದೇ ಜೈಲಿಗೆ ಬಂದ. ಅಧಿಕಾರಿಗಳು ಚಕಿತರಾದರು. ಅವನು ಹೇಳಿದ. "ಪ್ರಪಂಚದ ಈಗಿನ ವಿದ್ಯಮಾನಗಳನ್ನು ನೋಡಿದರೆ ಹೊರಗೆ ಇರುವುದಕ್ಕಿಂತ ಜೈಲಿನೊಳಗೆ ಇರುವುದೇ ಲೇಸು'' ಎಂದು ಹೇಳಿದನಂತೆ. ಈ ಪುಣ್ಯಾತ್ಮನನ್ನು ಅನುಸರಿಸುವ ಜನಗಳ ಸಂಖ್ಯೆ ದಿನದಿನಕ್ಕೆ ಹೆಚ್ಚಾಗುತ್ತಿರುವುದರಿಂದ ಜೈಲಿನಲ್ಲಿ ಸೀಟುಗಳಿಲ್ಲವೆಂದು ಹೇಳುತ್ತಾರೆ.

ಇನ್ನು ಕಾಲೇಜ್ ಸೀಟ್‌ಗಳ ವಿಚಾರ ಎಲ್ಲರಿಗೂ ತಿಳಿದಿರುವ ವಿಷಯ. ಹುಡುಗಿಯರಿಗೆ ವರ ಸಿಕ್ಕುವುದು ಎಷ್ಟು ಕಷ್ಟವೋ, ಹುಡುಗರಿಗೆ ಕಾಲೇಜುಗಳಲ್ಲಿ ಸೀಟು ಸಿಕ್ಕುವುದು ಅದಕ್ಕೂ ಕಷ್ಟ ಸಾಧ್ಯವಾಗಿದೆ. ಇಷ್ಟೆಲ್ಲ ಭಗೀರಥ ಯತ್ನದಿಂದ ಸೀಟ್ ಸಿಕ್ಕಿ, ಪರೀಕ್ಷೆ ಯಲ್ಲಿ ಪಾಸಾದರೆ ನೌಕರಿ ಸಿಕ್ಕುವುದಿಲ್ಲ.

ಸ್ವರ್ಗ ನರಕಗಳಲ್ಲೂ ಇದೇ ಹಾಡಂತೆ. ಅಲ್ಲಿಯೂ ಸೀಟಿಗೆ ಪರದಾಟವಾಗಿದೆಯಂತೆ. ಕಾಳಸಂತೆಕೋರರು, ಲಂಚರುಷುವತ್ತು ತಿಂದಿರುವವರನ್ನೆಲ್ಲಾ ನರಕದಲ್ಲಿ ತುಂಬುತ್ತಿದ್ದಾರಂತೆ ಸ್ವರ್ಗದ ತುಂಬ ದಾನಶೂರಕರ್ಣ, ಧರ್ಮರತ್ನಾಕರ, ಲೋಕಸೇವಾನಿರತ ಇವರುಗಳ ನ್ನೆಲ್ಲ ಕಲೆ ಹಾಕಿದ್ದಾರಂತೆ. ಆದರೆ ಇವರು ಸ್ವರ್ಗದಲ್ಲಿರಬೇಕೇ, ನರ ಕಕ್ಕೆ ಹೋಗಬೇಕೇ ಎಂಬ ಜಿಜ್ಞಾಸೆ ಉಂಟಾಗಿದ್ದರಿಂದ ಈ ವಿಷಯದ ಬಗ್ಗೆ ತೀರ್ಮಾನಕ್ಕೆ ಬರಲು ಒಂದು ವಿಚಾರಣಾಸಮಿತಿ ನಿಯಾ ಮಕವಾಗಿದೆಯಂತೆ. ಇದರ ತೀರ್ಮಾನ ಹೊರಬಿದ್ದ ಕೂಡಲೇ ತಿಳಿಸುತ್ತೇನೆ. ಈ ಹರಟೆಯನ್ನು ಇನ್ನೂ ಲಂಬಿಸುತ್ತಿದ್ದೆ, ಆದರೆ ಪ್ರಕಾಶಕರು ಎಲ್ಲಿ ಸೀಟ್ ಇಲ್ಲ ಅನ್ನುತ್ತಾರೋ ಎಂದು ಇಲ್ಲಿಗೇ ಮುಗಿಸಿದ್ದೇನೆ.

12-2-1951

# ಪತ್ರಿಕಾಭಿಪ್ರಾಯಗಳು

**ಎದಿರೇಟು—ನಾಡಿಗೇರ್ ಕೃಷ್ಣರಾಯರ ಕಾದಂಬರಿ.**

ಕನ್ನಡದಲ್ಲಿ ಹರಿತವಾದ ಶೈಲಿ ಶ್ರೀಮಾನ್ ನಾಡಿಗೇರರಿಗಿರುವಂತೆ ಬಹುಶಃ ಬೇರೆ ಯಾರಿಗೂ ಇರಲಾರದು. ಅವರದು ನೇರವಾಗಿ ಅಂತರ್ಗ್ಗವನ್ನೇ ಭೇದಿಸಿಕೊಂಡು ಹೋಗುವ ವಿಡಂಬನಾ ಕಠಾರಿ. ಎಲ್ಲದರಲ್ಲೂ ಅವರದೇ ಆದ ಒಂದು ವಕ್ರನೋಟ....

ಸಮಾಜದ ಭೀಕರ ಸ್ವರೂಪವನ್ನು ಇಷ್ಟು ಮನಮುಟ್ಟುವಂತೆ ಬರೆದವರು ಅಪರೂಪ. ಕೇವಲ ೧೪೧ ಪುಟಗಳಲ್ಲೇ ಒಂದು ಜಗತ್ತನ್ನೇ ಸೃಷ್ಟಿಸಿದ್ದಾರೆ ಲೇಖಕರು; ಈ ಬಗೆಯ ಸತ್ಯಸಾಹಿತ್ಯ ನಮ್ಮಲ್ಲಂತೂ ತೀರ ವಿರಳ. ಶ್ರೀಯುತರು ಮತ್ತು ಇವರ ಕಾದಂಬರಿ, ಭವಿಷ್ಯದಲ್ಲಾದರೂ ಇಂಥಾ ಸೃಷ್ಟಿಗೆ ಕಾರಣವಾಗಲಿ. ಶ್ರೀಯುತರು ಇಂಥ ಅನೇಕ ಕಾದಂಬರಿಗಳನ್ನು ಬರೆಯಬೇಕು.

**—ಪುಸ್ತಕ ಪ್ರಪಂಚ.**

..........ನಾಡಿಗೇರರ 'ಎದಿರೇಟು' ಅನೇಕರನ್ನು ಸುಸ್ತು ಹೊಡೆಸುವಷ್ಟು ಸತ್ಯ ಚಿತ್ರ.... ....ಗಂಡಸರೆನ್ನುತ್ತಾ ಮೀಸೆ ತಿರುವುತ್ತೀರಲ್ಲ! ಅದೆಲ್ಲ ಬೇಕಾಗಿಲ್ಲ–ಎದಿರೇಟು ಓದಿ, ಆಮೇಲೆ ಮೀಸೆ ತಿರುವಿ.

**—ಕಥೆಗಾರ.**

ಶಾರದಾ ಸಾಹಿತ್ಯ ಮಾಲೆಯ ೧೧ನೇ ಕಿರಣವಾದ ಈ ಕಾದಂಬರಿಯಲ್ಲಿ ವಿಡಂಬನ, ಹಾಸ್ಯ ಲೇಖಕರಾಗಿ ಹೆಸರು ಗಳಿಸಿರುವ ನಾಡಿಗೇರರು ಕೆಲವು ದುಃಖಜೀವಿಗಳ ನಿಜ ಚಿತ್ರವನ್ನು ಮನಮುಟ್ಟುವಂತೆ ಮೂಡಿಸಿದ್ದಾರೆ. ಇತರರನ್ನು ನಗಿಸುವ ವ್ಯಕ್ತಿ ಸಾಮಾನ್ಯವಾಗಿ ಜೀವನದ ನೋವನ್ನುಂಡವನಾಗಿರುವನೆಂಬುದು ಅನುಭವದ ಮಾತು. ನಾಡಿಗೇರರ ಈ ಕೃತಿ ಮೇಲೆ ಹೇಳಿದ ಮಾತಿಗೆ ಸಾಕ್ಷಿ.

**—ಪ್ರಜಾವಾಣಿ.**